ವೀರಭಾರತ ಗ್ರಂಥಮಾಲೆ : ೭




# ಅಜಿತನ ಶಿಸ್ತು

ಲೇಖಕರು :—

ವಾ. ಭೀ. ಥಿಟೆ. B. A.



1952 ........ ಬೆಲೆ : ೦-೫-೦

ಅಜಿತ ಪ್ರಕಾಶನ, ಬೆಳಗಾವಿ.

# ವೀರಭಾರತ ಗ್ರಂಥಮಾಲೆಯ

ವೈಭವಶಾಲಿಯಾದ ಎರಡನೆಯ ವರುಷದಲ್ಲಿ ಪದಾರ್ಪಣ.

## * ಈ ವರುಷದಲ್ಲಿ ಪ್ರಕಟವಾಗುವ ಪುಸ್ತಕಗಳು *

| | | |
|---|---|---|
| ೧ | ಅಜಿತನ ಶಿಸ್ತು | ೦-೫-೦ |
| ೨ | ದಾದಿ | ೦-೫-೦ |
| ೩ | ಗಲಿವ್ಹರನ ದೇಶ ಸಂಚಾರ | |
| ೪ | ಶುದ್ಧೀ ಸಂಘಟನೆ | |
| ೫ | ಸಮ್ರಾಟ ಖಾರವೇಲ | |
| ೬ | ? | |

ಅಜಿತ ಏಜನ್ಸಿ, ಟಿಳಕಚೌಕ-ಬೆಳಗಾವಿ.

ಮುದ್ರಕರು ಮತ್ತು ಪ್ರಕಾಶಕರು :—

ಎ. ಪಿ. ಚೌಗುಲೆ.

ವೀರಭಾರತ ಮುದ್ರಣಾಲಯ, ಬೆಳಗಾವಿ.

# ಮುನ್ನುಡಿ.

ಮಿತ್ರ ಶ್ರೀ. ಬಿ. ಥಿಟೆ ಅವರು ಉತ್ಸಾಹಿ ತರುಣ ಲೇಖಕರು. ಕನ್ನಡ ಇಂಗ್ಲೀಷ ತೆಗೆದುಕೊಂಡು ಬಿ. ಎ. ಪಾಸಾಗಿದ್ದಾರೆ. ಈಗ ಸರಕಾರಿ ಕಚೇರಿಯಲ್ಲಿ ಉದ್ಯಮ ಕೈಕೊಂಡಿದ್ದರೂ ಸಾಹಿತ್ಯಾಭಿರುಚಿಯನ್ನು ಕಳೆದುಕೊಂಡಿಲ್ಲವೆಂಬುದು ಅಭಿಮಾನ ವಿಷಯ.

‘ ಅಜಿತನ ಶಿಸ್ತು ’ ಎಂಬ ಸಂಗ್ರಹದಲ್ಲಿ ಬಂದ ಕೆಲವು ಚಿಕ್ಕರೂಪಕಗಳನ್ನು ನಾನು ಮೊದಲೆ ಓದಿದ್ದೆ; ಓದಿ ಸಮಾಧಾನ ಪಟ್ಟಿದ್ದೆ; ಕ್ರಿಸ್‌ಮಸ್ ರೂಪಕವು ಕನ್ನಡ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ರೈತ ಪುತ್ರ ಹಳ್ಳಿಯ ಶಿಕ್ಷಕರೊಬ್ಬರ ನಡುವೆ ‘ ಔದ್ಯೋಗಿಕ ಶಿಕ್ಷಣ ’ ‘ ಮಹಾತ್ಮಾಜಿಯವರ ವಿಧಾಯಕ ಕಾರ್ಯಕ್ರಮ ’ ಗಳನ್ನು ಕುರಿತು ನಡೆಯುವ ಸಂಭಾಷಣೆಗಳು. ಹಳ್ಳಿಯ ಜನರಿಗೆ ವಿಶೇಷ ಮಾಹಿತಿ ಕೊಡಬಹುದು. ‘ ಅಜಿತನ ಶಿಸ್ತು ’ ಮಕ್ಕಳ ಪಠ್ಯ ಪುಸ್ತಕಗಳಲ್ಲಿ ಬರಬಹುದಾದ ಒಂದು ಪಾಠವಾಗಿದೆ. ಶಾಲೆಯ ಮಕ್ಕಳಿಗೆ ಇದು ರುಚಿಸಬಹುದು.

ಮಿತ್ರ ಥಿಟೆ ಅವರು ಈ ಚಿಕ್ಕ ಪ್ರಕಟನೆಯಿಂದ ಉತ್ಸಾಹಗೊಂಡು ಇದಕ್ಕೂ ದೊಡ್ಡ ಕೃತಿಗಳಿಗೆ ಕೈಹಾಕುವಂತಾಗಲಿ; ನಿಜವಾದ ಸಾಹಿತ್ಯಗುಣವುಳ್ಳ, ಕಾವ್ಯರಸವುಳ್ಳ, ಜನಜೀವನದ ಚಿತ್ರಣವೆಂಬ ಬೆಲೆಯುಳ್ಳ ಗ್ರಂಥಗಳನ್ನು ಬರೆಯುವ ಸಾಮರ್ಥ್ಯವನ್ನು ಪಡೆಯಲಿ ಇವರ ಲೇಖನಿ ಎಂದು ನಾನು ಹಾರೈಸುವೆ. ಸಾಹಿತ್ಯ ಪರಿಚಯ, ಸಾಹಿತ್ಯ ಲವಲವಿಕೆಗಳುಳ್ಳ ಶ್ರೀ. ಥಿಟೆ ಅವರು ಇದನ್ನು ಸಾಧಿಸುವದು ಅಸಾಧ್ಯವೆಂದು ತೋರುವುದಿಲ್ಲ.

ಮುನ್ನುಡಿಯೆಂದರೆ ಮುಖಸ್ತುತಿಯಲ್ಲ. ತರುಣ ಸಾಹಿತಿಗೊಂದು ಮಾರ್ಗದರ್ಶನವೆಂಬ ದೃಷ್ಟಿಯಿಂದ ಇದನ್ನು ಬರೆದಿದ್ದೇನೆ. ಮಿತ್ರ ಥಿಟೆಯವರು ಇದೇ ದೃಷ್ಟಿಯಿಂದಲೇ ಇದನ್ನು ಅಪೇಕ್ಷಿಸಿ ಸ್ವೀಕರಿಸಿದ್ದಾರೆಂಬ ಭರವಸೆಯಿದೆ.

‘ ಎನ್ಕೆ ’

‘ ಅಜಿತನ ಶಿಸ್ತು ’

★ ಅಪ್ಪ ದುಡ್ಡು ಕೊಟ್ಟು ಕಲಿಸಿದ

★ ಅವ್ವ ಮುದ್ದು ಕೊಟ್ಟು ಬೆಳೆಸಿದ

★ ಮನೆತನಕ್ಕೆ ಇದನ್ನು ಅರ್ಪಿಸಿದ್ದೇನೆ—

ನಾ. ಭೀ. ಫಡ.

# ಹಿನ್ನುಡಿ.

ನನ್ನ ಈ ಐದು ಚಿಕ್ಕ ರೂಪಕಗಳು ರೇಡಿಯೋದಲ್ಲಿ ಪ್ರಚಾರವಾಗ ಬೇಕೆಂಬ ಇಚ್ಛೆಯಿಂದ ಬರೆದಂಥವುಗಳು. ಬರೆದವನು ಯಾವಾಗಲೂ ಹಿಂದೆಯೇ ಇರತಕ್ಕವನು. ಆಡುವವರು ಮುಂದೆ ಜನರಲ್ಲಿ ಆಡಿ ತೋರಿಸ ಬೇಕಾಗುವದು. ಕಾರಣ ಇದು ನನ್ನ ಹಿನ್ನುಡಿ !

ಮುಂಬಯಿ ರೇಡಿಯೊ ಕನ್ನಡ ಪ್ರೋಗ್ರ್ಯಾಮದಲ್ಲಿ ನನಗೆ ಹಿಡಿಸಿದ್ದು ಮಕ್ಕಳ ಕಾರ್ಯಕ್ರಮ. ನಾನೂ ಅದರ ಸದಸ್ಯನಾದೆ. ಬರೆಯಲು ಪ್ರಾರಂಭಿಸಿದೆ. 'ಔದ್ಯೋಗಿಕ ಶಾಲೆಗಳು' ಎಂಬ ಸಂಭಾಷಣೆ ಬರೆದು ಮುಂಬಯಿಗೆ ಕಳಿಸಿದೆ. ಅದಕ್ಕೆ ಮನ್ನಣೆದೊರೆತು ಅದು ಬಿತ್ತರಿಸಲ್ಪಟ್ಟಿತು. ಕಾರಣ ಹುರಪು ಬಂದು 'ಅಜಿತನ ಶಿಸ್ತು' ಎಂಬ ಚಿಕ್ಕರೂಪಕ ಬರೆದೆ. ಅದೂ ಮುಂಬಯಿ ರೇಡಿಯೋದಲ್ಲಿ ಪ್ರಚಾರವಾಗಿ ಜನರ ಮೆಚ್ಚಿಗೆ ಪಡೆ ಯಿತು. ಉಳಿದ ಮೂರು ರೂಪಕಗಳು ಆ ದಿಸೆಯಲ್ಲಿಯೇ ಬರೆದಂಥವು. ಅವುಗಳನ್ನು ಆಡ ಬಯಸುವವರು ಲೇಖಕನ ಪರವಾನಿಗೆ ಪಡೆದು ಆಡ ಬಹುದು.

ಇನ್ನು ಅವುಗಳ ವಿಷಯ. ದೇವರಿಗೆ ನಮ್ಮ ಹೃದಯದಲ್ಲಿ ಸ್ಥಾನ ಕೊಡಬೇಕು. ಶಾಂತಿ ಹಾಗೂ ಅಹಿಂಸೆಯ ಮೂರ್ತಿಯಾದ ಕ್ರೈಸ್ತನ ಜನನ ಸ್ಮರಿಸುವಂಥದು. ಅವನೂ ಅವತಾರ ಪುರುಷನೇ! ಜಗತ್ತು ಶಾಂತಿ ಶಾಂತಿ ಎಂದು ಕನವರಿಸುತ್ತಿದ್ದಾಗ ಅಂಥವನ ನೆನಪು ಯೋಗ್ಯ ಎಂದು 'ಕ್ರಿಸ್‌ಮಸ್' ಹಬ್ಬದ ಬಗ್ಗೆ ಬರೆದೆ. ಇದನ್ನು ಬರೆಯಲು ಹೊಳೆದದ್ದು 'ಟ್ರಿಝುರ್ ಚೆಸ್ಟ' ನಲ್ಲಿ ಕ್ರೈಸ್ತನ ಬಗ್ಗೆ ಬಂದ ಹಲವು ಲೇಖಗಳಿಂದ.

ಮಹಾರಾಷ್ಟ್ರದಲ್ಲಿ ಹಾಗೂ ಯುದ್ಧೋತ್ತರ ಔದ್ಯೋಗಿಕ ಶಾಲೆಗ ಳನ್ನು ನೋಡುವ ಯೋಗ ಒದಗಿತ್ತು. ಅದನ್ನು ಕಂಡು ಕರ್ನಾಟಕದ ಲ್ಲಿಯೂ ಇಂಥ ಶಾಲೆಗಳು ಅವಶ್ಯ ಎಂದುಕೊಂಡು 'ಔದ್ಯೋಗಿಕ ಶಾಲೆಗಳ' ಬಗ್ಗೆ ಸಂಭಾಷಣೆ ಬರೆದು ಅದನ್ನು ರೇಡಿಯೋದಲ್ಲಿ ಪ್ರಸಾರಗೊಳಿಸಿದೆ.

ಗಾಂಧೀಜಿಯವರ ಜೀವನದಲ್ಲಿ ಅವರ ವಿಧಾಯಕ ಕಾರ್ಯ ನನ್ನನ್ನು ಬೆರಗುಗೊಳಿಸಿತು. ಅವರ ಕಾರ್ಯ ಅಂದರೆ ಅವರ ಜೀವನ ಎಂದು ತಿಳಿದುಕೊಂಡು ಅವರ ಕಾರ್ಯಕ್ರಮದ ಪ್ರಸಾರ ಮಾಡಬೇಕೆನಿಸಿ ಅವರ ಕಾರ್ಯಕ್ರಮದ ಬಗ್ಗೆ ಪ್ರಸಾರ ಸುರುಮಾಡಿದೆ.

ಒಂದು ಶಿಸ್ತಿನಿಂದ ಅಹಿಂಸಾ ತತ್ವವನ್ನು ಬೆಳೆಸುತ್ತಾ ಹೇಗೆ ಹೋಗಬೇಕು ಎಂಬುದನ್ನು ' ಅಜಿತನ ಶಿಸ್ತು ' ನಲ್ಲಿ ಕಾಣಿಸಿದ್ದೇನೆ. ತಾಯಂದಿರು ತಮ್ಮ ಮಕ್ಕಳನ್ನು ಹೇಗೆ ಪಾಲಿಸಬೇಕು ಮತ್ತು ತಾಯಂದಿರೇ ಮಾನವನ ಆದ್ಯ ಗುರುಗಳು ಎಂಬುದನ್ನು ಈ ಚಿಕ್ಕ ರೂಪಕದಲ್ಲಿ ತೋರಿಸಿದ್ದೇನೆ.

' ನಾಡಹಬ್ಬ ' ಇದು ಕರ್ನಾಟಕ ಏಕೀಕರಣದ ಬಗ್ಗೆ ಬರೆದ ಚಿಕ್ಕ ರೂಪಕ. ಶಕ್ತಿ ದೇವತೆಯ ಪೂಜೆಯ ಮಹತ್ವ, ಸುಸಂಸ್ಕೃತ ಸಮಾಜ ಎಂಥದಾಗಿರಬೇಕು ಎಂಬುದನ್ನು ಇಲ್ಲಿ ಕಾಣಿಸಿದೆ.

ನನ್ನ ರೇಡಿಯೊ ಹಿರಿಯರಾದ ಶ್ರೀ. ಎನ್ ಕೆ. ಕುಲಕರ್ಣಿಯವರು ನನ್ನ ಮೇಲಿನ ಅಭಿಮಾನದಿಂದ ಮುನ್ನುಡಿ ಬರೆದು ದೊಡ್ಡ ಕೃತಿಗಳಿಗೆ ಕೈ ಹಾಕಲು ಹುರಿದುಂಬಿಸಿದ್ದಾರೆ. ಅವರಿಗೆ ನನ್ನ ಅನೇಕ ವಂದನೆಗಳು. ರೇಡಿಯೋದಲ್ಲಿ ಪ್ರಸಾರಗೊಳಿಸಿದ್ದ ಯಶಸ್ಸು ಅವರಿಗೆ ಸಲ್ಲುತ್ತಿದೆ.

ಈ ಮೊದಲು 'ಕರ್ನಾಟಕ ಶಕ್ತಿ' (ಹುಬ್ಬಳ್ಳಿಯಲ್ಲಿ) ' ಕ್ರಿಸ್‌ಮಸ್ '. ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮ ' ಪ್ರಾಥಮಿಕ ಶಿಕ್ಷಣ ' ( ಗ. ಟ್ರೇ. ಕಾ. ಧಾರವಾಡ ) ಪ್ರಕಟಿಸಿದ್ದಕ್ಕಾಗಿ ಆ ಸಂಪಾದಕರಿಗೆ ಆಭಾರಿಯಾಗಿದ್ದೇನೆ. 'ಅಜಿತನಶಿಸ್ತು' 'ಔದ್ಯೋಗಿಕ ಶಾಲೆಗಳು' ಎಂಬವುಗಳನ್ನು ಬಿತ್ತರಿಸಿ ಯಶಸ್ಸು ತಂದು ಕೊಟ್ಟದ್ದಕ್ಕಾಗಿ ಮುಂಬಯಿ ರೇಡಿಯೊ ಅಧಿಕಾರಿಗಳಿಗೆ ಋಣಿಯಾಗಿದ್ದೇನೆ. ವೀರಭಾರತ ಗ್ರಂಥ ಮಾಲೆಯಲ್ಲಿ ಈ ಚಿಕ್ಕ ಪುಸ್ತಕವನ್ನು ಮುದ್ರಿಸಿ ಪ್ರಕಟಗೊಳಿಸಿ ಪ್ರೋತ್ಸಾಹಿಸಿದ್ದಕ್ಕಾಗಿ ಶ್ರೀ. ಎ. ಪಿ. ಚೌಗುಲೆ ಬೆಳಗಾವಿ ಇವರಿಗೆ ತುಂಬಾ ಋಣಿಯಾಗಿದ್ದೇನೆ. ಇವರ ಸಂಗಡ ನನ್ನ ಮಿತ್ರರಾದ ಶ್ರೀ. ಎಸ್ ಆರ್. ಕುಲಕರ್ಣಿಯವರನ್ನು ಸ್ಮರಿಸುವೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯವೆಂಬುದು ಒಂದು ಭಾಗ. ಅದರಲ್ಲಿ ಶ್ರೀಗಳಾದ ಕಾರಂತ, ಹೊಯ್ಸಳ, ದೇವುಡು ಮೊದಲಾದವರು ಹೆಚ್ಚಿಗೆ ದುಡಿದಿದ್ದಾರೆ. ಮೈಸೂರ ಅರಸರ 'ಆಶ್ರಯದಲ್ಲಿ ಪ್ರೌಢ ಶಿಕ್ಷಣದ ಬಗ್ಗೆ ಪ್ರಕಟಿಸಿದ ಪುಸ್ತಕಗಳು ಪ್ರಸಿದ್ಧವಾಗಿವೆ. ಆ ದಿಶೆಯಲ್ಲಿ ನನ್ನ ಈ ಚಿಕ್ಕ ರೂಪಕಗಳು ಚಿಕ್ಕಮಕ್ಕಳಿಗಾಗಿ ಹಾಗೂ ಪ್ರೌಢ ಶಿಕ್ಷಣಕ್ಕಾಗಿ ಉಪಯೋಗವಾಗಬಹುದು ಎಂದು ನಂಬಿ ನನ್ನ ಈ ' ಹಿನ್ನುಡಿ ' ಯನ್ನು ಮುಗಿಸುವೆ.

— ವಾಮನ. ಭೀ. ಥಿಟೆ.

# ಕ್ರಿಸ್‌ಮಸ್

**ಪಾತ್ರಗಳು :-**

| | |
|---|---|
| ಪಾದ್ರಿ (Father) | ಸಾಂತಾ ಕ್ಲಾಜ (Santa Claus) |
| ಮಕ್ಕಳು (ನಾಲ್ಕು) | ಮುದುಕಿ |
| ಘಂಟೆ (೧) | ಮಂತ್ರಗಳು (೩) |
| ಕ್ರಿಸ್‌ಮಸ್‌ಗಿಡ | ಚಾಣ |
| ಮೇಣಬತ್ತಿ | ದೇವದೂತ. |

( ಕ್ರೈಸ್ತನು (Christ) ಜನಿಸುವದಿನ ಮುಂಜಾವು ನಸುಕಿನಲ್ಲಿ ಚರ್ಚದ (Church) ಘಂಟೆಗಳ ನಿನಾದವು ಒಂದೇ ಸವನೆ ಆಗತಾ ಇದೆ. ಒಂದು ಚರ್ಚದಲ್ಲಿ ಒಬ್ಬ ಪಾದ್ರಿ ಹಾಗೂ ಹುಡುಗರು ಕ್ರಿಸ್‌ಮಸ್‌ದ ಬಗ್ಗೆ ಮಾತನಾಡುತ್ತ ಇರುವರು ) ಅದು ಹೀಗೆ :—

( ಕ್ರಿಸ್‌ಮಸ್ ಘಂಟೆಗಳ ನಿನಾದವು ಅದಬಳಿಕ )

ಪಾದ್ರಿ:— ಮಕ್ಕಳೇ, "ಕ್ರಿಸ್‌ಮಸ್"ವು ಯಾರಿಂದ ಜರುಗಿಸಲ್ಪಡುತ್ತದೆ ಎಂಬುದನ್ನು ಹೇಳಬಲ್ಲಿರಾ?

೧ನೇ ಮಗು:— ಕ್ರಿಸ್‌ಮಸ್‌ದಲ್ಲಿ ಘಂಟೆ ಮುಖ್ಯ. ಅವೇ ನಮಗೆ 'ಕ್ರಿಸ್‌ಮಸ್' ಮಾಡುವವೆಂದು ತೋರುವುದು.

ಪಾದ್ರಿ:— (೨ನೇ ಮಗುವಿಗೆ) ನೀನು ಹೇಳು.

೨ನೇ ಮಗು:— ಅಲ್ಲ. ಕ್ರಿಸ್‌ಮಸ್‌ದಲ್ಲಿ ಕ್ರಿಸ್‌ಮಸ್ ಗಿಡ ಮುಖ್ಯ.

ಪಾದ್ರಿ:— (೩ನೇ ಮಗುವಿಗೆ) ನೀನು ಹೇಳು.

೩ನೇ ಮಗು:— ಇಲ್ಲಾ, ಇಲ್ಲಾ. ಕ್ರಿಸ್‌ಮಸ್‌ದಲ್ಲಿ ಮೇಣಬತ್ತಿಗಳು ಮುಖ್ಯ. ಹಿಂದುಗಳು ದೀಪಾವಳಿಯಲ್ಲಿ ದೀಪಗಳನ್ನು ಬೆಳಗಿಸುವಂತೆ ನಾವು ಮೇಣಬತ್ತಿಗಳನ್ನು ಬೆಳಗಿಸುವ ಹಬ್ಬವದು.

ಪಾದ್ರಿ:— ೪ನೇ ಮಗುವಿಗೆ ನೀನು ಹೇಳು ಮಗು.

೪ನೇ ಮಗು:— ಸಾಂತಾಕ್ಲಾಜಾ ಮುಖ್ಯ. ಏಕೆಂದರೆ, ನಮಗೆ ಅವನು ತಿಂಡಿ ತಿನಸುಗಳನ್ನೂ ಹಾಗೂ ಆಟಿಗೆ ಸಾಮಾನು ಗಳನ್ನೂ ಕೊಡುವನು.

ಪಾದ್ರಿ:— ಒಳ್ಳೇದು ಮೊದಲು ನಿಮ್ಮಂತೆಯೇ ಹೋಗುವೆನು. ಹಾಗಾದರೆ ನಿಮಗೆ ಕ್ರಿಸ್‌ಮಸ್ ಕಾರ್ಡು ಚಂದ ಚಿತ್ರಗಳನ್ನು ತರುವ ಪೋಸ್ಟುಮನ್ ಕ್ರಿಸ್‌ಮಸ್ ಜರುಗಿಸುವನಲ್ಲವೇ?

ಮಕ್ಕಳು:— (ಎಲ್ಲರೂ) ಹೌದು ಅವನು ಮುಖ್ಯ.

ಪಾದ್ರಿ:— ಸ್ವಲ್ಪ ತಡೆಯಿರಿ ಮಕ್ಕಳೇ; ನಿಮ್ಮ ಪ್ರಕಾರ ತಿಂಡಿ ತಿನಸು ಕೊಡುವ ಅಜ್ಜಿಯೂ ಆ ದಿನ ಮುಖ್ಯ. ಇರಲಿ ಘಂಟೆ, ಮೇಣಬತ್ತಿ, ಕ್ರಿಸಮಸ್ ಗಿಡ, ಸಾಂತಾಕ್ಲಾಜ ಮೊದಲಾದವರನ್ನು ಒಬ್ಬೊಬ್ಬರನ್ನಾಗಿ ಕರೆದು ಕೇಳುತ್ತೇನೆ. ಯಾರು ಕ್ರಿಸ್‌ಮಸ್ ಮಾಡುವರೆಂದು ಕೇಳೋಣ.

[ಮೊದಲು ಘಂಟೆಗಳನ್ನು ಕರೆಯುವರು. ದೊಡ್ಡ ಹಾಗೂ ಚಿಕ್ಕ ಘಂಟೆಗಳು ಮಾತನಾಡಲು ಪ್ರಾರಂಭಿಸುವವು.] (ಸಪ್ಪಳ) ಅದರಲ್ಲಿ ಒಂದಕ್ಕೆ—

ಪಾದ್ರಿ:— ನಿಮ್ಮನ್ನು ಕರೆದದ್ದು ಏಕೆಂದರೆ, ನೀವೇ ಏನು ಕ್ರಿಸ್‌ಮಸನ್ನು ಜರುಗಿಸುವವರು?

ಘಂಟೆ:— ನಾವು, ನಾವೇ?! ಎಂಥ ಒಳ್ಳೇ ವಿಚಾರ! ನಾವಾ ಗಿದ್ದರೆ ಚನ್ನಾಗಿತ್ತು. ಆದರೆ ಪಾದ್ರಿಯವರೇ ನಾವು ಕೇವಲ ಸಂದೇಶ ಬೀರುವವರು. ನಮಗೆ ಕೇವಲ ಒಳ್ಳೇ ನಾಲಿಗೆ ಇದೆ. ನಮ್ಮ ಶರೀ ರವು ಒಳ್ಳೇ ಬಿರಸು. ಹಾಗೂ ಹಿತ್ತಾಳಿಯಿಂದ ಮಾಡಿದ್ದು-ಆದರೆ ನಾವು ಕೊಡುವ ಸಂದೇಶವು ಮಧುರವಾದದ್ದು. ಕ್ರಿಸ್‌ಮಸ್‌ದಲ್ಲಿ ಈ ಕಾರ್ಯವು ನಮ್ಮಿಂದ ಸ್ವಲ್ಪ ಇದ್ದರೂ ನಾವು ಹಟ ಮಾಡುವದಿಲ್ಲ.

ನಮಗೆ ಕ್ರಿಸ್‌ಮಸ್‌ದಲ್ಲಿ ಇಷ್ಟು ಪಾತ್ರ ಸಿಕ್ಕಿತಲ್ಲ ಎಂಬುವೇ ನಮಗೆ ಮಹದಾನಂದ. ಆದರೆ ನಾವು ನಿಮಗೆ ಯಾರು ಕ್ರಿಸ್‌ಮಸ್ ಮಾಡುವರೆಂದು, ಹೇಳಬಲ್ಲೆವು? ನಿಬಿಡವಾದ ಅರಣ್ಯದಲ್ಲಿ ಬೆಳೆಯುವ 'ಕ್ರಿಸ್‌ಮಸ್‌ಗಿಡ'ವು ತನ್ನನ್ನು ಕ್ರಿಸ್‌ಮಸ್‌ದಲ್ಲಿ ಉಪಯೋಗಿಸುವರೆಂದು ವರ್ಷಾನುವರ್ಷ ಅದನ್ನೇ ಚಿಂತಿಸುತ್ತ ಬೆಳೆಯುವುದು.

(ಆಗ ಕ್ರಿಸ್‌ಮಸ್ ಗಿಡದ ಬಗ್ಗೆ ಹೇಳಿದ ಮಗು ಟಣ್ಣನೆ ಜಿಗಿದು) —"ನೋಡಿರಿ ನಾನು ಹೇಳಿದ್ದು" (ಎನ್ನಲು ಪಾದ್ರಿ ಕ್ರಿಸ್‌ಮಸ್ ಗಿಡವನ್ನು ಕರೆಯುವರು.) ಅದು ಬಂದು ಮಾತಾಡುವದು. [ಅಡವಿಯಲ್ಲಿ ಸ್ವಲ್ಪ ಗಾಳೀ ಬೀಸಿದಂತೆ-ಸಪ್ಪಳ ಮಾಡಿ ಗಿಡದ ಕಲ್ಪನೆ ತರಬೇಕು. ]

ಕ್ರಿಸ್‌ಮಸ್ ಗಿಡ:— ನನ್ನ ಕೆಲಸವು ಅತಿ ಚಿಕ್ಕದಾಗಿದ್ದರೂ ಮತ್ತಾವದನ್ನೂ ನಾನು ಬೇಡಲಾರೆ. ನಾವು ನಮ್ಮ ಕೈಗಳಿಂದ ಮಕ್ಕಳ ತಂದೆಗಳು ಕೊಟ್ಟಂಥ ಪಾರಿತೋಷಕಗಳನ್ನು ಸ್ವೀಕರಿಸಿ ಅವರ ಹೃದಯವನ್ನು ಒಳ್ಳೇ ಪದಾರ್ಥವನ್ನೀಯುವ ದೇವಾಧಿದೇವನ ಕಡೆಗೆ ಹೊರಳಿಸುವೆವು. ನಮ್ಮ ಚೂಪಾದ ಎಲೆಗಳು ಸ್ವರ್ಗದ ಕಡೆಗೆ ಹೊರಳಿರುತ್ತವೆ. ಮತ್ತು ನಮ್ಮ ತೋಳುಗಳು ಮಾನವ ಕುಲವನ್ನು ಆಶೀರ್ವದಿಸಿ ಮನೆಯಲ್ಲಿ ಹಾಗೂ ಪ್ರಚಂಡವಾದ ಈ ಜಗತ್ತಿನಲ್ಲಿಯೇ ಸ್ವರ್ಗವನ್ನು ಕಾಣುವಂತೆ ಮಾಡುತ್ತೇವೆ.

ಪಾದ್ರಿ:— ಹಾಗಾದರೆ ನೀವೂ ಕ್ರಿಸ್‌ಮಸ್‌ದಲ್ಲಿ ಮುಖ್ಯಸ್ಥರಲ್ಲ!

ಕ್ರಿ. ಗಿಡ:— ಹೌದು, ಅಂಥ ಭಾಗ್ಯವು ನಮ್ಮದಲ್ಲವೆಂದು ಮೊದಲೇ ಹೇಳಿದ್ದೆ. ನಾವು..........!

ಮಗು:— ಅಲ್ರಿ, ಅವುಗಳಿಗೆ ಮೇಣಬತ್ತಿಗಳ ಬೆಳಕು ಬೇಕು. ಅಂದರೆ ಅವು......... !

ಪಾದ್ರಿ:— ಹಾಗಾದರೆ ಮೇಣಬತ್ತಿಗಳು ಬರಲಿ. (ಎಂದು ಕರೆಯಲು ಅವು ಬಂದು)

ಮೇಣಬತ್ತಿಗಳು:— (ಅವುಗಳಲ್ಲಿ ಒಂದು) ನಾವು ಕ್ರಿಸ್ ಮಸ್ ಬೆಳಕಿನ ಬಗ್ಗೆ ಇದ್ದ ಕಥೆಯನ್ನು ಹೇಳಲು ಬಂದಿದ್ದೇವೆ. ನಮ್ಮ ಕಥೆ ಅತಿ ಹಿಂದಿನದು. ಬೋನಾಫಿಸನೆಂಬ ಸನ್ಯಾಸಿಯು ಅತ್ತಲಿತ್ತ ಹರವಿದ್ದ ಹಳ್ಳಿಗಳಿಗೆ [ಉತ್ತರ ಯುರೋಪದಲ್ಲಿ] ಒಳ್ಳೇ ಸುದ್ದಿಗಳನ್ನು ಒಯ್ಯುವ ಕಾಲವದು. ಒಂದು ಕ್ರಿಸ್‌ಮಸ್ ಮೊದಲು ಸಂಜೆಯ ದಿನ. ಒಂದು ಮನಸ್ಸಿಗೆ ದುಃಖವಾಗುವ ಸ್ಥಳಕ್ಕೆ ಆತ ಬಂದ. ಪುರಾತನ ಜನರಿಗೆ ಪವಿತ್ರವಾದ 'ಓಕ' ಎಂಬ ಗಿಡದ ಬಳಿಯಲ್ಲಿ ಮನುಷ್ಯನನ್ನು ಆಹುತಿ ಕೊಡುವುದರಲ್ಲಿ ಕೆಲವು ಜನರಿದ್ದರು. ಆಗ್ಗೆ ಬೋನಿಫಿಸ್‌ನು ಅತ್ಯಂತ ಕರುಣೆಯಿಂದ ಅವರಿಗೆ ದೇವರು ಕೊಟ್ಟಂಥ ಬಹು ಅಮೂಲ್ಯವಾದ ಕಾಣಿಕೆ ಅಂದರೆ — ಮಗು ಕ್ರೈಸ್ತನ ನೆನಪು ಮಾಡಿಕೊಟ್ಟು ಆಹುತಿಗೀಡಾದ ಮಗುವನ್ನು ಬಿಡಿಸಿ ಕ್ರಿಸ್‌ಮಸ್ ಗಿಡದ ಹತ್ತಿರ ಕುಳಿತು ಎಲ್ಲರಿಗೆ ದೇವರಲ್ಲಿ ಪ್ರಾರ್ಥಿಸುವಂತೆ ಹೇಳಿ ಗಿಡಕ್ಕೆ ಉಳಿದ ಸಂದೇಶ ಬೀರಲು ಹೇಳಿದ. ಆದರೆ ಅಲ್ಲಿ ಕಗ್ಗತ್ತಲೆ ಇತ್ತು. ಗಿಡದ ಸಂದೇಶವು ಕೇಳದಾಯಿತು. ಕಾಣದಾಯಿತು. ಆಗ ಬೋನಾಫಿಸ್‌ನ, ಮೇಣಬತ್ತಿಗಳನ್ನು ಹಚ್ಚಿ ಬೆಳಕು ಮಾಡುವಂತೆ ಮಾಡಿದರು. ಮಿಣಗುತ್ತಿರುವ ಬೆಳಕಿನಲ್ಲಿ ಒಳ್ಳೆಯವರಾದ ಸಾಧು ಬೋನಾಫಿಸ್‌ರು 'ಜ್ಯೋತಿಯೇ ಜೀವನವು' ಎಂಬ ಕಥೆಯನ್ನು ಮುಂದೆ ಹೇಳಿ ಮುಗಿಸಿದರು. ನೆರೆಮನೆಗೆ ತೆರಳ ಹತ್ತಲು ಬೋನಾಫಿಸ್‌ರು ಗಿಡದಿಂದ ಮೇಣಬತ್ತಿಗಳನ್ನು ತೆಗೆದು ಒಬ್ಬೊಬ್ಬರಿಗೆ ಒಂದೊಂದು ಕೊಟ್ಟು 'ನಿಜವಾದ' ಬೆಳಕು

ನಿಮ್ಮಲ್ಲಿ ಬೆಳಗಲಿ ಹಾಗೂ ತಾಮಸವು ಕಡೆಯವರೆಗೂ ಕಳೆಯಲಿ' ಎಂದು ಸಂಧೇಶ ಕೊಟ್ಟರು. ಆದ್ದರಿಂದ ಕ್ರಿಸ್‌ಮಸ್ ಗಿಡಗಳೂ ನಾವೂ ಅಂದಿನಿಂದ ನಮ್ಮ ನಮ್ಮ ಅಲ್ಪ ಪಾತ್ರವನ್ನು ವಹಿಸುತ್ತಾ ಬಂದಿರುತ್ತೇವೆ.

. (ಮುಂದೆ ಪಾದ್ರಿಯವರು ಸಾಂತಾಕ್ಲಾಜನನ್ನು ಕರೆಯುವರು. ಅವನು ಬಂದು)

ಪಾದ್ರಿ:— ಸಾಂತಾ ನೋಡಿದ್ಯಾ ಈ ಉತ್ಸುಕತೆಯ ಬಾಲಕರನ್ನು! ನೀನು, 'ಕ್ರಿಸ್‌ಮಸ್' ದಲ್ಲಿ ಸರ್ವಸ್ವವೇ? ಹೇಳು.

ಸಾಂತಾ:— ನಾನು......ನಾನೇ! ಆಶೀರ್ವದಿಸಿ ಹಾಗೆ ಅಂಥ ಮಹತ್ವದ ಕೆಲಸದಲ್ಲಿ ನನ್ನ ಪಾತ್ರವೇ? ನನ್ನ ಜೀವನ ಕೆಲಸವು ಹುಡುಗರ ಆಟಿಗೆ ಪಾರಿತೋಷಕಗಳಲ್ಲಿ ಮಾತ್ರ. ನನ್ನ ಕೆಲಸ ಕೇವಲ ಪದಾರ್ಥಗಳ ಬಗ್ಗೆಯೇ ಇದೆ.

ಒಬ್ಬ ಮಗು:— ಆದರೆ ಆ ಪದಾರ್ಥಗಳು ಉತ್ತಮವಾಗಿವೆ. ಅವೇ ಕ್ರಿಸ್‌ಮಸ್ ಹಬ್ಬವನ್ನು ಮಾಡುವವು.

ಸಾಂತಾಕ್ಲಾ:— ಓ ಪ್ರಿಯ ಮಗು. ನಾನು ಹೇಳುವದನ್ನು ಕೇಳು ಎಷ್ಟೋ ಜನರು ಈ ಪದಾರ್ಥಗಳ ಬಗ್ಗೆ ದುಃಖಿಸುವದನ್ನು ಕೇಳಿದ್ದೀಯಾ? ಇಂಥ ಪದಾರ್ಥಗಳನ್ನು ಪ್ರತಿಬಂಧಿಸುವ ಸಮಾಜವಿದ್ದರೆ ಆಶ್ಚರ್ಯವಿಲ್ಲ. ಜಗತ್ತು ಸುಂದರವಾದ ವಸ್ತುಗಳಿಂದ ತುಂಬಿದೆ. ಅವುಗಳಿಂದ ರಾಜರಂತೆ ಆನಂದಿಸಲು ಬರದಿದ್ದರೂ ಒಳ್ಳೇ ಸಂದೇಶ ಕೊಡುವ ಮೃದು ಶಬ್ದಗಳಿವೆಯಲ್ಲ.

(ಆಗ ಒಬ್ಬ ಮುದುಕಿ ಬಂದು)

ಮುದುಕಿ:— ಕ್ರಿಸ್‌ಮಸ್‌ದಲ್ಲಿ ಹಾಡುವ ದೇವರ ಮಂತ್ರ

ಗಳೇ ಮುಖ್ಯ. ( ಎನ್ನಲು ಪಾದ್ರಿಯವರು ಮಂತ್ರಗಳನ್ನು ಕರೆಯುವರು ). **ಅವು ಹೀಗೆ ನುಡಿಯುವವು.**

೧ನೇ ಮಂತ್ರಃ— “ ಓ, ಬನ್ನಿ ದೇವದೂತಗಳೇ ಬನ್ನಿ !

೨ನೇ ಮಂತ್ರಃ— ‘ ಅದು ಮಧ್ಯ ರಾತ್ರಿಯಲ್ಲಿ ಮೂಡಿತು.!’

೩ನೇ ಮಂತ್ರಃ— ಓ ! ಬೆಥಲಾಮ್ ಎಂಬ ಹಳ್ಳಿಯಲ್ಲಿ ! ( ಆನಂದದ ಘಂಟೆಗಳು ಬಾರಿಸುವುದು ಮಕ್ಕಳು ಅವುಗಳನ್ನು ಕೇಳಿ ಕುಣಿಯುವರು. )

ಪಾದ್ರಿ ( ತನ್ನಲ್ಲಿಯೇ ):— ನಾನು ಕ್ರಿಸ್‌ಮಸ್‌ದಲ್ಲಿ ಮುಖ್ಯನಲ್ಲ ಎಂದು ಕೆಲವರು ಈ ಜಗತ್ತಿನಲ್ಲಿ ಸ್ವರ್ಗದ ಬಗ್ಗೆ ವಿಚಾರಿಸುತ್ತಿರುವಾಗ್ಗೆ ಮಾಡುವದುಂಟು. ಆದರೆ ನಾನು ಯಾವಾಗಲೂ ಕ್ರೈಸ್ತನ ಸೇವಕನೆಂದು ಬಗೆದು ಕ್ರಿಸ್‌ಮಸ್‌ದ ಸಾಮಾನ್ಯ ಪದಾರ್ಥಗಳನ್ನು ನಿಜವಾದ ಸ್ವರ್ಗದ ಒಡೆಯನ [ದೇವರ] ಕಲ್ಪನೆಯಿಂದ ಬೆಳಗಿಸಲು ಯತ್ನಿಸುತ್ತೇನೆ. ( ಎಂದು ತನ್ನಲ್ಲಿಯೇ ತಲ್ಲೀನನಾಗುವ )

( ಆಗ ಒಮ್ಮೆಲೇ ದೇವದೂತ ಬಂದು ) :— ಮಕ್ಕಳೇ ನಾವು ಕಥೆಯನ್ನು ಹೇಳುವವರು ಈ ಕ್ರಿಸ್‌ಮಸ್‌ದಲ್ಲಿ ಉಳಿದವರೂ ಕೂಡಿರುವರು.

[ ಆಗ ಒಂದು ಕಡೆ ಒಬ್ಬ [ಪಾಲಕನು] :— ನಾವು ಬೆಥಲಾಮ್‌ಕ್ಕೆ ಹೋಗೋಣ. ನಮ್ಮ ಒಡೆಯನು ಹೇಳಿದ ಸಂದೇಶವನ್ನು ನೀರಕ್ಷಿಸುವಾ. ಎಂದು ಅನ್ನುವನು. ]

( ದೇವದೂತ ಆ ಪಾತ್ರದಲ್ಲಿ ) **ಒಬ್ಬ ಜಾಣ** :— “ ಆತನ ನಕ್ಷತ್ರವನ್ನು ಪೂರ್ವದಿಕ್ಕಿನಲ್ಲಿ ಕಂಡಿದ್ದೇನೆ. ಆದ್ದರಿಂದ ಆವನನ್ನು ಪ್ರಾರ್ಥಿಸಲು ಬಂದಿದ್ದೇನೆ.... ”

ಪಾದ್ರಿ ಒಮ್ಮೆಲೇ ಎಚ್ಚತ್ತು:— “ಇಲ್ಲಿ ನೋಡಿ ಕ್ರಿಸ್‌ಮಸ್ ಜ್ಯೋತಿ ಇದೆ. ಇನ್ನು ನನ್ನ ಕೆಲಸವಾಯಿತು ನಾನು ತೆರಳುವೆ.”

[ ದೇವದೂತ ಒಮ್ಮೆಲೆ ಬಂದು ಪಾದ್ರಿಯ ಕೈ ಸ್ವೀಕರಿಸಿ ]

( ಉಳಿದವರಿಗೆ ಕೇಳಿಸದಂತೆ ) :—

ದೇವದೂತ:— ನೀನು ನನಗೆ ಅವಶ್ಯವಾಗಿ ಬೇಕಾಗಿರುವಿ. ನಾನೂ ನೀನೂ ಕೂಡಿ ಇಷ್ಟು ದಿನಗಳವರೆಗೆ ಕ್ರಿಸ್‌ಮಸ್‌ದಲ್ಲಿ ಕೆಲಸ ಮಾಡಿರುವೆವು. ಈಗ ಅವುಗಳನ್ನು ಬಿಡಬೇಡಾ [ ಎನ್ನುತ್ತಾ, ಪಾದ್ರಿಯನ್ನು ಹೊಗಳುತ್ತ ] ಇಷ್ಟು ಜನರನ್ನು ಕ್ರಿಸ್ ಹಬ್ಬ ಮಾಡಲು ಕೂಡಿಸಿರುವಿ. ( ಸ್ನೇಹಮಯ ದೃಷ್ಟಿಯಿಂದ ಎಲ್ಲ ಕಡೆಗೂ ನೋಡಿ ) ( ಎಲ್ಲರಿಗೂ ಕೇಳುವಂತೆ )– ಯಾರು ಅವನನ್ನು ಸ್ವಾಗತಿಸಲು ( ಕ್ರೈಸ್ತನನ್ನು ಸ್ವಾಗತಿಸಲು ) ಇದ್ದೀರಿ ಅಲ್ಲಿ ?

ಮಕ್ಕಳು ( ಹೌಹಾರಿ ) :— “ಎಲ್ಲಿರುವರು ! ಎಲ್ಲಿದ್ದಾರೆ ಅವರು ?”

ದೇವದೂತ:— ಯಾರಿಗೂ ಕಾಣದಂತೆ ‘ ಪ್ರತಿಯೊಂದು ಹೃದಯದಲ್ಲಿ ಆತನಿಗೆ ಸ್ಥಾನಕೊಡಿರಿ, ಹಾಗು ಸ್ವರ್ಗ ಮತ್ತು ಸೃಷ್ಟಿ ಹಾಡಲಿ.

[ ಆನಂದ ವಾತಾವರಣದ ಸಪ್ಪಳದಲ್ಲಿ ದೇವದೂತನು ಒಬ್ಬರಿಂದ ಮತ್ತೊಬ್ಬರ ಕಡೆಗೆ ಹೋಗುತ್ತ, ಪ್ರಸನ್ನನಾಗಿ, ಮೊದಲು ಪಾದ್ರಿಗೆ ಹೀಗೆ ಹೇಳುವನು:—“ ನೀನು ಕ್ರಿಸ್‌ಮಸ್‌ದ ಬಗ್ಗೆ ಅವರಿಗೆ ಎಲ್ಲವನ್ನೂ ಹೇಳಿರುವಿ. ಯಾವುದನ್ನೂ ಮರೆಯಲಿಲ್ಲ.”

( ಘಂಟೆಗಳಿಗೆ ) :— ನೀವು ಕ್ರೈಸ್ತ ಜನನ ಹಾಗೂ ಆತನ ಪ್ರೇಮವನ್ನು ಸ್ಮರಿಸಲು ಸಹಾಯ ಮಾಡಿರುವಿರಿ.

[ ಕ್ರಿಸ್‌ಮಸ್ ಗಿಡಗಳಿಗೆ ] :— ನೀವು ಮಾನವರ ಕಾಣಿಕೆ ಗಳಿಂದ ದೇವರನ್ನು ಸ್ಮರಿಸಲು ಹೇಳುವಿರಿ.

( ಸಾಂತಾ ಕ್ಲಾಜನಿಗೆ ) :— ನಿನ್ನ ಆನಂದದಲ್ಲಿ ಮನೆತನದ ಅಭಿಮಾನವನ್ನು ಹೆಚ್ಚಿಸುವಿ.

( ಅಜ್ಜಿಗೆ ) :— ನೀನು ನಿಜವಾದ ಗೆಳತಿ ಅವರಿಗೆ !

( ಎಲ್ಲ ಹುಡುಗರಿಗೆ ) :— ( ಒಂದು ನಿಮಿಷ ಸೂರ್ಯನಂತೆ ಹೊಳೆಯುತ್ತ ಅವರ ಎದುರಿನಲ್ಲಿ ) —“ ದೇವರು ಮಕ್ಕಳನ್ನು ಎಲ್ಲ ರಿಗಿಂತಲೂ ಹೆಚ್ಚಾಗಿ ಪ್ರೀತಿಸುವನು. ಚಿಕ್ಕ ಮಕ್ಕಳು ನನ್ನ ಕಡೆಗೆ ಬರಲಿ ಎಂದು ಆತನು ಹೇಳುವದನ್ನು ನೀವು ಕೇಳಿಲ್ಲವೇ ! ಆತನು ಸ್ವತಃ ಮಗುವಿನ ರೂಪದಲ್ಲಿ ( ಕ್ರೈಸ್ತ ) ಈ ಜಗತ್ತಿಗೆ ಬಂದನು. ( ಕ್ರಿಸ್‌ಮಸ್ ಜ್ಯೋತಿ ಎಲ್ಲರಿಗೂ ಕಾಣುವುದು. ಮಕ್ಕಳು ಆನಂದಿ ಸುವರು. ರಾಗ ಸುರು ಮಾಡುವರು. )

ದೇವದೂತ:— [ ಎಲ್ಲರಿಗೂ ] — ‘ ತೊಟ್ಟಿಲ ಕಡೆಗೆ ಹೋಗಿ ! ’

ಮಕ್ಕಳು :— [ ನಿರಾಶೆಯಿಂದ ಒಮ್ಮೆಲೇ ] ಅದು ಬರಿ ಹಾಗಿದೆಯಲ್ಲಾ !

ದೆವದೂತ :— ಕ್ರೈಸ್ತ ಮಗುವಿಗೆ ಕಟ್ಟಿಗೆಯ ತೊಟ್ಟಿಲದ ಕಾರಣವಿಲ್ಲ. ಈ ತೊಟ್ಟಿಲವು ಆತನಿಗೆ ನಮ್ಮ ( ಹೃದಯದಲ್ಲಿ ಸ್ಥಾನ ಕೊಡಬೇಕೆಂಬುದರ ಚಿನ್ನ ಮಾತ್ರ. ಆತನ ದಾರಿಯ ಚಿಂತೆ ನಮ್ಮಲ್ಲಿರ ಬೇಕು. ಆದರೆ ಕೇವಲ ಗದ್ದಲ ಮಾಡಿ ಆತನನ್ನು ಮರೆತರೆ ಆತನಿಗೆ ದುಃಖವಾಗುವದು.

[ ಮಕ್ಕಳು ಹೊರಗೆ ಶಾಂತ ರೀತಿಯಿಂದ ಹೀಗೆ ಅನ್ನುವರು ] ನೀನು ನನ್ನ ಸಿಂಹಾಸನವನ್ನು ತೊರೆದಿ! ನಿನ್ನ ರಾಜಕಿರೀಟವನ್ನು ತ್ಯಜಿ ಸಿದಿ !

( ಎಲ್ಲ ಹಿರಿಯರೂ ತಮ್ಮ ಕಾಲುಗಳನ್ನು ಮಣಿಸಿ ದೇವರ ಮುಂದೆ ಬಾಗಿ ) " ಜಗತ್ತಿಗೆ, ಸಂತೋಷವಾಗಲಿ ! ದೇವರು ಜನಿಸಿದರು ! "

ದೇವದೂತ :— ' ಸ್ವರ್ಗಲೋಕವೇ, ಮೃತ್ಯುಲೋಕವೇ, ಮಾನವರೇ ಹಾಗೂ ಸೃಷ್ಟಿಯೇ ನಾವೆಲ್ಲರೂ ಕ್ರೈಸ್ತ ಮಗುವನ್ನು ಸ್ಮರಿಸುವುದರಲ್ಲಿ ಭಾಗಿಗಳಾಗಿದ್ದೇವೆ. ಬರಿದಾದ ಈ ತೊಟ್ಟಿಲವು ಆತನ ದಾರಿ ಕಾಯುತ್ತಿರುವ ನಮಗೆ ನಮ್ಮ ಒಳ್ಳೇತನವನ್ನು ಆತನ ಪೆಟ್ಟಿಗೆಯಲ್ಲಿ ಇಡುವಂತೆ ಆಗಲಿ ಎಂದು ಹಾರೈಸೋಣ ! [ ಎಂದು ಹೇಳಿ ಮಾಯವಾಗುವನು. ]

( ದೂರದಲ್ಲಿ ಕೆಳಗಿನ ಹಾಡು ಕೇಳಿಸುತ್ತದೆ. )

೧

ಮಗುವಿನ ಜನನ ವಿಸ್ಮಯ ಎಂದೋ ? ಬಹಳ ದಿನಗಳ ಹಿಂದೆ !
( ಅದು ) ದಾರಿಕಾಯುತ್ತಿರುವ ಜಗತ್ತಿಗೆ ಸ್ವರ್ಗದ
ಬೆಳಕನ್ನೀಯುತ್ತಿದೆ.

೨

ಆಶ್ಚರ್ಯ ! ಅವನು ಕಾಯುವ ಚಿಕ್ಕೆ ಏನೋ ! ನಿಶ್ಚಲ ಪ್ರಖರ
( ವಾಗಿದೆ ಅದು ) ಈಗ ಬೆಡಲೆ ಹೆಮ್ಮಕ್ಕೆ ಈ ಪವಿತ್ರ
ರಾತ್ರಿಯಲ್ಲಿ ದಾರಿ ತೋರಿಸುತ್ತದೆ !

೩

ಅತಿದೂರು ದಿನ್ನೆಯ ಮೇಲೆ ಅದೇನು ? ದೇವತೆಗಳ ಹಾಡು
ಯುಗ ಯುಗ ಕಳೆದರೂ ಆ ಧ್ವನಿಯು ಪ್ರತಿ ಧ್ವನಿಗೈಯ್ಯುತ್ತಿದೆ.
" ಶಾಂತಿ, ಶುಭೇಚ್ಛೆ " ಎಂದು.

---

2

# ಔದ್ಯೋಗಿಕ ಶಾಲೆಗಳು

ಬುದ್ಧಯ್ಯ ಮಾಸ್ತರ:— "ಯಾಕಪಾ ಕಲ್ಲಪ್ಪಾ ನೀ ಬಂದಿ ಇವತ್ತ ನಮ್ಮ ಸಾಲಿಗೆ?

ಕಲ್ಲಪ್ಪ:— ಭರಮ್ಯಾಗ ಒಂದಿಷ್ಟು ಅಕ್ಷರ ಕಲಿಸಬೇಕು. ಅಂತ ನಿಮ್ಮ ಸಾಲಿಗೆ ಕರಕೊಂಡು ಬಂದಿನ್ರಿ.

ಬುದ್ಧ. ಮಾ:— ಅವಗೇನು ಸಾಲಿಗೆ ಕಳಿಸತಿಯೋ? ೧೫ ವರುಷದವಾ ಇದ್ದಾನ. ಅವ್ಗ ಏನಾರ ಕಲಿಸಬೇಕಾದರ ಅವಗ ದುಡಿಲಿಕ್ಕೆ ಹಚ್ಚಬೇಕು ನೋಡು.

ಕಲ್ಲಪ್ಪ:— ದುಡೀಲಿಕ್ಕೆ ಅಂದರ ಒಕ್ಕಲತನ ಹೌದೋ ಅಲ್ರಿ?

ಬು. ಮಾ:— ಬರೆ ಒಕ್ಕಲತನ ಯಾಕೋ? ಗೊತ್ತಿಲ್ಲ ನಿನಗ ಈಗ ಪಟ್ಟಣದಾಗ ಔದ್ಯೋಗಿಕ ಶಾಲೆಗಳನ್ನು ತಗದಾರ ಅಂಬೋದು.

ಕಲ್ಲಪ್ಪ:— ಔದ್ಯೋಗಿಕ ಶಾಲೆ ಅಂದರೇನ್ರಿ ಯಪ್ಪಾವ್ರ?

ಬು. ಮಾ:— ಔದ್ಯೋಗಿಕ ಶಾಲೆ ಅಂದ್ರ ಅಲ್ಲಿ ನಿಮಗ ಅನೇಕ ಧಂದೆ ಕಲಿಸತಾರೆನಪ್ಪಾ.

ಕಲ್ಲಪ್ಪ:— ಧಂದೆ ಕಲಿತರ ಏನ ಬರತದ್ರಿ ಈ ದಿಂದಾಗ?

ಬು. ಮಾ:— ಹಾಂಗಲ್ಲ ಕಲ್ಲಪ್ಪಾ ನಿನಗ ಗೊತ್ತಿಲ್ಲ. ನಮ್ಮ ದೇಶದಾಗ ದೇವರು, ಸ್ವರ್ಗ, ಆತ್ಮ ಇವುಗಳ ಬಗ್ಗೆ ಸಾಕಷ್ಟು ಕಲಿತು ಮುಂದ ಹೋಗ್ಯಾರ. ಆದರ ಸಂಗಡ ಈ

ಧಂದೆಗಳನ್ನು ಕಲಿತರ ನಮ್ಮ ಹಾದ್ಯಾನs ಪರದೇಶದವರು ಕೂಡ ಕಲೀಬೇಕಾಗತದ ತಿಳಿತs ?

ಕಲ್ಲಪ್ಪ:— ಯಾವ ಧಂದೆ ಕಲಿಬೇಕು ಒಂದಿಷ್ಟು ಹೇಳ್ರಿ ಅಪ್ಪಾವ್ರ ?

ಬು. ಮಾ:— ಧಂದೆಗೇನೋ ತುಂಬ್ಯಾವ ಮಾಡಬೇಕು ಅಂದ್ರs? ಧಂದೆದೊಳಗ ಇದು ದೊಡ್ಡದು ಇದು ಸಣ್ಣದು ಅಂಬೋದs ಇಲ್ಲ. ಯಾವ ಧಂದೆನರ ತಗೊ, ಅದರಲ್ಲಿ ಪ್ರವೀಣ ಆದೆಂದ್ರ ದುಡ್ಡಿಗೇನೂ ಚಿಂತೆಯಿಲ್ಲ. ಹೊಟ್ಟೀಪಾಡು ದುಡ್ಡು ಸಿಕ್ಕರ ಕೇಳತೀ ಏನು ಮತ್ತ!

ಕಲ್ಲಪ್ಪ:— ಈ ಧಂದೆ ಕಲಿಸುವ ಶಾಲೆಗಳು ನಮ್ಮ ಸಮೀಪದಾಗ ಅವೇನ್ರಿ?

ಬು. ಮಾ:— ೪-೫ ಔದ್ಯೋಗಿಕ ಶಾಲೆಗಳನ್ನು ದೊಡ್ಡ ಪಟ್ಟಣದಾಗ ತೆಗೆದರು ಮೊದಲ. ಈಗ ಹಗುರ ಹುಬ್ಬಳ್ಳಿಯಂಥಾ ಪಟ್ಟಣದಾಗ ತಗದಾರ. ಮೆಲ್ಲಕ ಬಾಗಲಕೋಟೆ, ಬಿಜಾಪೂರ, ಗದಗ ಇವುಗಳಲ್ಲಿಯೂ ಆಗಬಹುದು.

ಕಲ್ಲಪ್ಪ:— ಅವೆಲ್ಲ ಆತ್ರಿ ಯಾವ ಧಂದೆ ಆ ಸಾಲಿ ಒಳಗ ಕಲಿಸತಾರs.

ಬು. ಮಾ:— ಹಾಂಗಾರ ಕೇಳು ಕಲ್ಲಪ್ಪಾ ಸಾಯಕಲ್, ಫೋನೊ ಗೊತ್ತವ ನಿನಗ. ಅವುಗಳು ಬೇರೆ ಬೇರೆ ಭಾಗಗಳಿಂದ ಜೋಡಿಸಲ್ಪಟ್ಟಿರತವ. ಅವನ್ನು ಹ್ಯಾಗೆ ಜೋಡಿಸಬೇಕು ಎಂಬುದನ್ನು ಮೊದಲು ಅಲ್ಲಿ ಕಲಿಸತಾರ. ಇದನ್ನು ಕಲಿಸುವ ಮಾಸ್ತರು ಯಂತ್ರ ಶಿಕ್ಷಣ ಪಡೆದವರು ಇರತಾರ. ಸಾಯಕಲ್ ಕೆಟ್ಟರ ಅದನ್ನು ಸುಧಾರಿಸಲಿಕ್ಕೆ ಪ್ರತಿಯೊಂದು ಭಾಗದ ಮಾಹಿತಿ

ಅವರು ಮಾಡಿ ಕೊಡತಾರ. ಹಿಂಗ ಸಾಯಕಲ್ಲವ ಬಗ್ಗೆ ಮಾಹಿತಿ ಮಾಡಿಕೊಂಡು ನೀವು ಸ್ವತಂತ್ರ ಒಂದು ಸಾಯಕಲ್ ರಿಪೇರಿ ಅಂಗಡಿಯನ್ನು ಹಳ್ಳಿಯಲ್ಲಿ ತೆಗೆಯಬಹುದು.

ಕಲ್ಲಪ್ಪ:— ಸಾಯಕಲ್ಲ ಅಂಗಡಿ ಹಳ್ಯಾಗ ತಗದರ ಏನ ಲಾಭರೀ ?

ಬು. ಮಾ:— ಹಳ್ಳಿ ಒಳಗ ಸಾಯಕಲ್ಲ ಅಂಗಡಿ ತಗದರ ಸ್ವಲ್ಪ ಖರ್ಚನ್ಯಾಗ ನಿಮಗೆ ಪಟ್ಟಣಕ್ಕೆ ಹೋಗಿ ನಿಮ್ಮ ಕೆಲಸ ಮಾಡಿಕೊಂಡು ತಿರುಗಿ ಹಳ್ಳಿಗೆ ಬರಲಿಕ್ಕೆ ಬರತದ ಎನಪಾ. ನಿನಗ ಒಂದು ಹೇಳಬೇಕಂದ್ರ ಈಗ ಗೌಳ್ಯಾರು ಇರತಾರಲಾ ಆವರು ತಮ್ಮ ಹಾಲು ಒಯ್ದು ಪಟ್ಟಣದಲ್ಲಿ ಮಾರಿ ತಿರುಗಿ ಹಳ್ಳಿಗೆ ಬರಬಹುದು.

ಕ:— ಸಾಯಕಲ್ಲ, ಕೆಟ್ರ ?

ಬು:— ಸಾಯಕಲ್ ಕೆಟ್ರ ರಿಪೇರಿ ಅಂಗಡಿ ನಿಮ್ಮ ಊರಾಗs ಇರತದಲ್ಲ.

ಕ:— ಒಂದು ಸಾಯಕಲ್ಲ ಸುಧಾರಿಸುವ ಅಂಗಡಿ ತಗಿಲಾಕ ಎಷ್ಟು ಖರ್ಚು ಬರತದರ್ರಿ ?

ಬು:— ಒಂದು ಉತ್ತಮ ಅಂಗಡಿ ತೆಗೆಬೇಕಾದ್ರ ಸು. ೧೦೦೦ ರೂ. ಹಿಡಿಯುಬಹುದು.

ಕ:— ಇಷ್ಟು ಖರ್ಚು ಎಲ್ಲಿಂದ ಮಾಡಬೇಕ್ರಿ ?

ಬು:— ಊರಾಗ ೪-೮ ದೊಡ್ಡ ಜನ ಸಿಗುದಿಲ್ಲs ಅಂಥ ದೊಡ್ಡ ಸಾವುಕಾರ್ರು ಸಹಾಯ ಮಾಡಿದ್ರ ತಾನೇ ಆಗತದ ಅಂಗಡಿ ಇದನ್ನ ವಿಚಾರಿಸುವುದು ಮುಂದೆ. ಮೊದಲು ಮತ್ತೊಂದು ಧಂದೆ ಕೇಳು ? ಕಟ್ಟಿಗೆ ಸಾಮಾನು ಮಾಡೋದು ಒಂದು ?

ಕಲ್ಲಪ್ಪಾ:— ಅದೇನ್ರಿ–ನಮ್ಮ ಬಡಗ್ಯಾರ ಮಾಡತಾರ್ರಿ ಆ ಧಂದೆನ್ನs !

ಬು:— ಬರೆ ಬಡಗ್ಯಾರ್ರೆ ಯಾಕೊ? ಬೇಕಾದ ನಿರುದ್ಯೋಗಿ ಜನ ಅದನ್ನ ಮಾಡಬೇಕು ನೋಡು. ಇವನ್ನ ಕಲಿತರ ಲಾಭ ಬಹಳ ನೋಡು.

ಕ:— ಅಧ್ಯಾಂಗ್ರಿ ?

ಬು:— ಗೊತ್ತಿಲ್ಲ ನಿನಗ? ದೇಶ ಎಷ್ಟು ಸುಧಾರಿಸೇತಿ ಅಂಬೋದು. ಪಟ್ಟಣದಾಗ ಖುರ್ಚಿ, ಟೇಬಲ್ಲು ಇರದಿದ್ದ ಮನೀನ ಇಲ್ಲನೋಡು. ಅಂದವ್ಯಾಲ ಅವುಗಳನ್ನು ಮಾಡಿಕೊಟ್ಟರ ಲಾಭ ಆಗುದಿಲ್ಲ? ಮತ್ತು ಮೇಲಾಗಿ ಈ ಧಂದೆ ಕಲಿತರs ಫೋಟೋ ಕಟ್ಟು, ರೂಳುಕಟ್ಟಿಗೆ, ಬಡಿಗೆ, ಹಣದ ಪೆಟ್ಟಿಗೆ ಮಾಡಲಿಕ್ಕ ಬರತದ. ಮುಂದೆ ಅದರೊಳಗ ಜಾಣರಾದರs ಕಟ್ಟಿಗೆ ಕೆತ್ತಿ ಒಳ್ಳೇ ಸುಂದರ ಮೂರ್ತಿಗಳನ್ನು ಮಾಡಿ ತುಂಬಾ ಲಾಭ ಪಡೆ ಯುಬಹುದು.

ಕ:— ಮತ್ಯಾವ್ರಿ?

ಬು:— ಚಿತ್ರ ಬರೆಯೋದು (ಡ್ರಾಯಿಂಗ) ಮತ್ತು ಬಣ್ಣ ಹಚ್ಚುವುದು. (ಪೇಟಿಂಗ) ಈ ಧಂದೆ ನಡಿಸಬೇಕಾದರ ಬಣ್ಣಗಳ ಡಬ್ಬಿ, ಕುಂಚ, ಕಂಪಾಸ ಪೆಟ್ಟಿಗೆ ಇದ್ದರ ನಡೀತದ, ಈ ಧಂದೆ. ಇದನ್ನ ಕಲಿತರ ಸಿನೇಮಾ ಪಟಗಳನ್ನು ಬರೆಬಹುದು. ಜಾಹೀ ರಾತು ಬರೆದು ಬೇಕಾದಷ್ಟು ಹಣ ಗಳಿಸಬಹುದು. ಹಂಗ ಬೆತ್ತದ ಕೆಲಸಾನೂ ಕಲಿಸತಾರ. ನಾವು ಕೈಯ್ಯಾಗ ಹಿಡಿಯುವ ಬೆತ್ತವಲ್ಲ! (ಅಹ.... ಹ ಹ!) ಬೆತ್ತದಿಂದ ಮಾಡುವ ಧಂದೆ. ಇದರಾಗ ಜಾಣರಾದರೆ ಬೆತ್ತದಿಂದ ಹೆಣೆದ ಖುರ್ಚಿ, ಹೂವಿವ ಬುಟ್ಟಿ, ಚಾಪಿ, ಬ್ಯಾಗ, ಟ್ರಂಕ ಮುಂ. ಗಳನ್ನು ಮಾಡಲಿಕ್ಕೆ ಬರತದ.

ಕ:— ಖರೇ ನೋಡ್ರಿ ಅಪ್ಪಾವ್ರ ಮತ್ಯಾವ್ರಿ ?

ಬು:— ನೂಲೋದು. ನೇಯುದು-ಅಂತು ನಿನಗ ಗೊತ್ತ ಅದ ಅಲ್ಲ. ಗಾಂಧಿಯವರಂತೂ ನೂಲುವ ಮಹತ್ವ ಎಷ್ಟು ಅದ ಅಂಬೋದನ್ನ ಸಾವಿರಾರು ಸಾರೆ ಹೇಳಿದ್ದರು. ಮತ್ತ:— "ನಾವೆಲ್ಲ ದುಡಿಯುವುದು ಒಂದು ಹೊಟ್ಟೆಗಾಗಿ ಒಂದು ಬಟ್ಟೆಗಾಗಿ"— ಎಂಬ ದಾಸರ ಪದ ನಿನಗ ಗೊತ್ತಿಲ್ಲ? ಅದಕೇನೇ ಈ ಸ್ವಂತ ನೂತ ಅರಿವೆಯ ಮಹತ್ವ ಬಹಳ ನೋಡು. ನೂಲು ತೆಗೆದು ಅದರಿಂದ ಹೆಣೆದು ಕಾಲಚೀಲ, ಸ್ವೇಟರ್, ಮು. ಗಳನ್ನ ಮಾಡಲಿಕ್ಕೆ ಬರತದ ನೋಡು.

ಕ:— ನಿಜ ನೋಡ್ರಿ. ಮತ್ಯಾವ ಅತಿ ಉಪಯೋಗದ್ದ ವರ್ರಿ ?

ಬು:— ಕೋಳಿಸಾಕೋದು.

ಕ:— ಅದೇನು ದೊಡ್ಡ ಕೆಲಸ್ರಿ ನಮ್ಮ ರಹೀಮಾನನ ಮನ್ಯಾಗ ಬೇಕಾದಷ್ಟು ಕೋಳಿ ಅವ.

ಬು:— ಬರೆ ಕೋಳಿ ಇದ್ರ ಅಲ್ಲ ಕಲ್ಲಪ್ಪಾ. ಅವನ್ನ ಒಳ್ಳೇ ರೀತಿಯಿಂದ ಆರೈಕೆ ಮಾಡಿದರ ನಮಗ ೧೮ ದಿನದಾಗ ಕೋಳಿ ಮರಿ ಸಿಗತಾವ ನೋಡು.

ಕ:— ಅದ್ಯಾಂಗ್ರಿ ಜೀವ ಹುಟ್ಟಿಸೋದು ಮನುಷ್ಯನಿಂದ ಆಗತದ ?

ಬು:— ಅದಕ ನೋಡು ಕಲಿಯದವರಿಗೆ ಬುದ್ಧಿ ಇಲ್ಲಾ ಅಂಬೋದು. ಪೂರ್ಣ ಹೇಳುತನಕ ಕಿವಿಗೊಟ್ಟು ಕೇಳು. ಮೊದಲು ತತ್ತಿಗಳನ್ನು ಕೋಳಿಗಳಿಂದ ಪಡೆದು ಕೃತ್ರಿಮ ಕಾವು ಕೊಟ್ಟು ಬೇಗ ಮರಿಗಳನ್ನು ಪಡೆಯಬಹುದು. ಆ ಮೇಲೆ ಮರಿಗಳು ಹೊರಗೆ ಬಂದನಂತರ ಕೆಲವು ದಿನ ಕೃತ್ರಿಮ ತಾಯಿ

ಹತ್ತಿರ ಇಡಬೇಕು—ಅಂದರ ಅದು ಒಂದು ಕಟ್ಟಿಗೆಯ ಸಣ್ಣ ಮನೆ ಯಿರತದ. ಮತ್ತು ಹೊರಗಿನ ಹವಾ ಒಮ್ಮಿಲೆ ಮರಿಗಳಿಗೆ ತಗಲುವದಿಲ್ಲ. ಮುಂದೆ ಮರಿಗಳು ದೊಡ್ಡವು ಆದ ಮೇಲೆ ಅವುಗಳಿಗೆ ಬೇಕಾಗುವ ಕಾಳುಗಳನ್ನು ಹಾಕುವದು. ಈ ಧಂದೆ ಯಿಂದ ಲಾಭ ಬಹಳ ಖರ್ಚು ಕಡಿಮೆ. ತಿಳಿತ. ಇನ್ನೊಂದು ವಿಷಯ. ಕೋಳಿಗಳಿಗೆ ಬೇನೆ ಬಂದರೆ ಸೂರುಗಟ್ಟಿಲೆ ಸಾಯು ತ್ತವೆ. ಅದಕ್ಕೆ ಆವುಗಳಿಗೆ ಬೇನೆ ಬರದಂತೆ ಕಾಳಜಿ ತಗೊಳ್ಳಬೇಕು. ಹಿಂಗ ಸ್ವಲ್ಪ ದಿನದಾಗ ಮರಿಗಳನ್ನು ಪಡೆದು ತತ್ತಿ ಹಾಗೂ ಮರಿಗಳನ್ನು ಮಾರಾಟ ಮಾಡಿ ಲಾಭ ಪಡೆಯಬಹುದು.

ಕಃ— ಬಹಳ ಸುಲಭ ಐತಿ ನೋಡ್ರಿ ಈ ಧಂದೆ. ನಾ ಒಕ್ಕಲಿಗ ನಮಗ ಎನಾರ ಉಪಯೋಗದ ಕೆಲಸ ಹೇಳತೀರೇನ್ರಿ ?

ಬುಃ— ಅದಕ್ಕೇನು! ಅಲ್ಲಿ ಒಕ್ಕಲತನಕ್ಕೂ ಆಸ್ಪದ ಅದ ಕೇಳು. ಅಲ್ಲಿ ಹಣ್ಣುಗಳ ರಸ ಕಲೆ ಹಾಕುವುದನ್ನು ಕಲಿಸತಾರ. ಮೊಸಂಬಿರಸ, ಸಂತ್ರಿರಸ, ಮಾವಿನರಸ, ದ್ರಾಕ್ಷಾರಸ, ಮು. ಗಳನ್ನು ಬಾಟಲಿಗಳಲ್ಲಿ ಹಾಕಿ ಹವಾ ಬಡಿಯದಂತೆ ಮುಚ್ಚಿ ಪರ ದೇಶಗಳಿಗೂ ಕಳಿಸಿ ಲಾಭ ಪಡೆಯಬಹುದು. ಹಂಗಾ ಪಲ್ಯಾ ಕಾಯಿ ಬೆಳಿಸುವದಂತೂ ನಿಮಗ ಹೊಲದಲ್ಲಿ ಬೆಳಿಸಿ ಗೊತ್ತ ಆದ. ಅದನ್ನು ಶಾಸ್ತ್ರೀಯ ದೃಷ್ಟಿಯಿಂದ ಹೇಗೆ ಉತ್ತಮ ರೀತಿಯಲ್ಲಿ ಬೆಳಿ ಸಬೇಕು ಅಂಬುದನ್ನು ಅಲ್ಲಿತಿಳಿಸತಾರ ಎನಪಾ.

ಕಃ— ಒಳ್ಳೇ ಉಪಕಾರ ಮಾಡಿದ್ರಿ ಮಾಸ್ತರ ಇದನ್ನೆಲ್ಲಾ ಹೇಳಿ ನೀವು ಹೇಳಿದಂತೆ ನಡಿಯುವೆವು. ಶರಣ್ರಿ. ಹೋಗಿ ಬರತೀನಿ.

ಬುಃ— ಇದೇ ನನಗೆ ಪರಮಾನಂದ. ಹೋಗಿಬಾ ಕಲ್ಲಪ್ಪ! ”

# ಗಾಂಧೀಜಿಯವರ-

## ವಿಧಾಯಕ ಕಾರ್ಯಕ್ರಮ

ಪಾತ್ರಗಳುಃ— (೧) ಕಲ್ಲಪ್ಪ.
(೨) ಬುದ್ಧಯ್ಯ ಮಾಸ್ತರ.

(ಖಿನ್ನಮುಖನಾಗಿ ಕಲ್ಲಪ್ಪ ತಮ್ಮ ಶಾಲೆಗೆ ಬಂದದ್ದನ್ನು ಕಂಡು ಬುದ್ಧಯ್ಯ ಮಾಸ್ತರರು ಮಾತ ನಾಡಿಸಲು ಪ್ರಾರಂಭಿಸುವರು).

ಬುದ್ಧಯ್ಯ ಮಾಸ್ತರಃ— ಏನ ಕಲ್ಲಪ್ಪ ಇಷ್ಟ್ಯಾಕ ಸಣ್ಣ ಮೋರಿ ಮಾಡೀದಿ ? ಇವತ್ತ್ಯಃ.

ಕಲ್ಲಪ್ಪಃ— "ಏನ್ರಿ ! ದ್ಯಾವರಂಥಾ ಮನಸ್ಯಾನ ಕಳಕೊಂಡ ಇಂದಿಗೆ ೭ ತಿಂಗಳ ಆತು. ಅದರ ದುಃಖ ಮಾತ್ರ ಬಿಡಲೊಲ್ಲದು. ಜನ್ಮ ಜನ್ಮಕ್ಕರ ಅಂಥಾ ಮನಸ್ಯಾ ಸಿಗಾಣನ್ರಿ."

ಬು. ಮಾಃ— ನಿಜಾ. ಕಲ್ಲಪ್ಪಾ ನಮಗೂ ದುಃಖ ಆಗೇದ ಬರೇ ದುಃಖ ಪಟ್ಟರ ಏನ ಬರತದ್ಯ. ಮಹಾತ್ಮಾ ಗಾಂಧಿಯವರನ್ನು ನಿಜವಾಗಿ ಪ್ರಿತಿಸದಿದ್ದರ ನಾವು ಅವರು ಹೇಳಿದಂತೆ ನಡೆದು ಜಗತ್ತಿಗೆ ಪಾಠ ಹಾಕಿ ಕೊಡಬೇಕು ನೋಡು.

ಕಃ— ನಮಡಃ ನಮಗತಿ ಇಲ್ಲ. ಉಳಿದ ದೇಶದ್ದೇನ್ರಿ ಯಪ್ಪಾವ್ರ ?

ಬು. ಮಾ. ಃ— ಹೌದು ಅಲ್ಲಿ ನೋಡು ಎದುರಿಗೆ ಗಾಂಧಿಯವರ ಚಿತ್ರ. ನಗುತ್ತಲಿದ್ದಾರೆ ಅಲ್ಲವೆ ?

ಕ ಃ— ಹೌದ್ರಿಯಪ್ಪ ಎಂಥಾ ನಗಿರಿ ಅದು!

ಬು. ಮಾ. ಅಂತಃಕರುಣದಿಂದ ಉಕ್ಕಿ ಬರುವ ನಗೆ! ಬರೆ ಅಷ್ಟೇ ಅಲ್ಲ ಅದರಾಗ ಅರ್ಥ ಅದ ತಿಳೀತ.

ಕ ಃ— ಅದ್ಯಾಂಗ್ರೀ ಮಾಸ್ತರಽ ಒಳೇ ಹೇಳವ್ರು ನೋಡ್ರಿ ನೀವು.

ಬು. ಮಾ:— ಅಂದ್ರ "ತಾನು ಹೇಳುವ ಸತ್ಯ, ಅಹಿಂಸಾ ಮಾರ್ಗವನ್ನು ಜನರು ಆಚರಣೆಯಲ್ಲಿ ತರಲು ಎಷ್ಟು ಹಿಂದುಮುಂದು ನೋಡುವರು. ಜಗತ್ತಿಗೆ ಪಾಠ ಹಾಕಿಕೊಡ ಬೇಕೆಂದ್ರು ನಮ್ಮ ಜನರ ಲ್ಲಿಯೇ ಗುಣಗ್ರಾಹಕ ಶಕ್ತಿ ಇಲ್ಲವೋ? ಈ ತತ್ವಗಳನ್ನು ಮೈಗೂಡಿಸಿ ಕೊಳ್ಳುವ ಬುದ್ಧಿ ಇವರಲ್ಲಿ ಎಂದು ಬರುವುದೋ?" ಎಂಬ ವಿಚಾರಮಾಡಿ, ಇರಲಿ ಒಮ್ಮೆಯಾದರೂ ಇವರಿಗೆ ಬುದ್ಧಿ ಬಂದೀತು? ಎಂದು ಅಂತಃಕರುಣಪೂರ್ವಕವಾಗಿ ವಿಚಾರಿಸಿ ನಸುನಕ್ಕು ಭಾರತ ಮಾತೆಯ ಕರುಣಾಜನಕ ಸ್ಥಿತಿಯನ್ನು ಕಂಡು ಅದನ್ನು ಮನದಲ್ಲಿ ಹತ್ತಿಕ್ಕಲು ತೋರುವದಿಲ್ಲವೇ ಆ ನಗೆಯಲ್ಲಿ?

ಕ:— ಘನ ವಿಚಾರ್ರಿ ಎಷ್ಟಾ ನಿಮ್ಮದು!

ಬು. ಮಾ:— ಅಷ್ಟೇ ಅಲ್ಲ. ಅವರು ಬರೀ ಮಾತಿನ ವೀರ ರಲ್ಲ. ಪ್ರಪಂಚದ ಯಥಾರ್ಥ ವಾದಿಗಳಲ್ಲಿ ದೊಡ್ಡ ಸ್ಥಾನ ಗಳಿಸಿ ದವರು-ಅಂಥವರಲ್ಲಿ ಸಾವಿರಾರು ಜೀವಗಳ ಸಾವು ಬದುಕಿನ ಸಮಸ್ಯೆ ಯನ್ನು ಬಿಡಿಸುವಾಗ ಸ್ವಲ್ಪಾದರೂ ಆಲಸ್ಯಕ್ಕೆ ಎಡೆ ಇದ್ದೀತ? ಅಂತೇ ಅವರು ವಿಧಾಯಕ ಕಾರ್ಯಗಳನ್ನು ಜನರ ಮುಂದೆ ಇಟ್ಟರು. ಮತ್ತ ಅದರಂತೆ ಅವರು ಇಡೀ ಜೀವಮಾನದಲ್ಲಿ ಮಾಡಿ ತೋರಿಸಿದರು.

ಕ:— ಅದೇನೊ ವಿಧಾಯಕ ಕಾರ್ಯಕ್ರಮ ಅಂದ್ರೆಲ್ಲಾ ಅದೇನ್ರಿ?

ಬು. ಮಾ:— ಮಹಾತ್ಮಾ ಗಾಂಧಿಯುವರು ಸತ್ಯ ಮತ್ತು ಅಹಿಂಸಾ ಮಾರ್ಗಗಳ ಮೂಲಕ ಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯ ಕಟ್ಟುವವಕ್ಕೆ ವಿಧಾಯಕ ಕಾರ್ಯಕ್ರಮ ಎಂದು ಹೆಚ್ಚು ಉಚಿತವಾಗಿ ಕರೆಯುಬಹುದು ಎಂದು ಹೇಳಿದ್ರು ನೋಡು.

ಕ:— ಸ್ವಾತಂತ್ರ್ಯ ಸಿಕ್ಕು ೪ ವರುಷ ಆತ್ರಿ ಇನ್ಯಾಕ್ರಿ ಆ ವಿಧಾಯಕ ಕಾರ್ಯಕ್ರಮ?

ಬು. ಮಾ:— ಸ್ವಾತಂತ್ರ್ಯನೋ ಮಹಾತ್ಮರಂಥವರ ತಪ ಪ್ರಭಾವದಿಂದ ದೊರಕಿತು. ಆವರ ಈಗ ಅದನ್ನು ಉಳಿಸಿ ಕೊಂಡು ಹೋಗುವ ಭಾರ ನಮ್ಮ ' ವ್ಯಾಲ ಅವ ನೋಡು. ನೋಡಿಲ್ಲ ಜನರಲ್ಲಿ ಎಷ್ಟು ಅಸಂತೋಷ! ಎಷ್ಟು ಪಾರ್ಟಿ! ನಮ್ಮವರು ಮುಂವೆ ಬರಬೇಕು. ನಿಮ್ಮವರು ಮುಂದ ಬರ ಬೇಕು ಎಂಬ ಹಟ ಏನು.

ಕ:— ಹೌದು ನೊಡ್ರಿ, ಏನ್‌ರೇಶನ್, ಬ್ಲ್ಯಾಕ್ ಮಾರ್ಕೆಟ್ ಏನು ಬಡವರನ್ನು ವ್ಯಾಪಾರಸ್ಥರು ಹರಿದು ತಿಂತಾರ ನೋಡ್ರಿ. ಸುಖಾನ ಇಲ್ರಿ.

ಬು. ಮಾ:— ಇಷ್ಟೆಲ್ಲ ಯಾಕ ಆತು ಗೊತ್ತೈದನ ನಿನಗ? ಆ ಮಹಾತ್ಮ ಹೇಳಿದ್ದು ಕೇಳದಕ್ಕ ತಿಳಿಯುದ್ದಕ್ಕ! ಅವರು ಹೇಳಿದ ವಿಧಾಯಕ ಕಾರ್ಯಕ್ರಮಗಳಲ್ಲಿ ನಾವು ಎಷ್ಟು ಆಚರಣೆಯಲ್ಲಿ ತಂದೀವಿ ಅಂಬೋದನ್ನ ಅಷ್ಟು ವಿಚಾರಿಸು ಏನಪಾ.

ಕ:— ಅವು ಏನೇನು ಅವ ಅಂಬೋದನ್ನ ಒಂದೀಟು ಹೇಳ್ರಿ ದ್ಯಾವ್ರು?

ಬು. ಮಾ:— ಅಲಾ ಕಲ್ಲಪ್ಪ ನೀ ಕೇಳೆ ಇಲ್ಲ. ಹಾಂಗಾರ ಕೇಳು ಮೊದಲನೆಯದಾಗಿ ಜಾತೀಯ ಐಕ್ಯ.

ಕ:– ನಮ್ಮ ಹಿಂದುಸ್ತಾನದಾಗ ಎಷ್ಟು ಜಾತಿ ಅವಾವ್ರಿ ಎಪ್ಪಾ?

ಬು. ಮಾ:— ನಮ್ಮಲ್ಲಿ ಅಷ್ಟ ಯಾಕ, ಎಲ್ಲ ದೇಶದಲ್ಲೂ ಅವ ಇರಲಿ. ಜಾತೀಯ ಐಕ್ಯ ಅಂದರೇನು ! ಎಂಬುದನ್ನು ಚನ್ನಾಗಿ ತಿಳಿದುಕೋ.

ಅದು ನಮ್ಮ ಮೇಲೆ ಹೇರಬಹುದಾದ ರಾಜಕೀಯ ಐಕ್ಯವು. ಇಂತಹ ಐಕ್ಯವಲ್ಲವೆಂಬುದನ್ನು ಪ್ರತಿಯೊಬ್ಬ ತಿಳಿದುಕೊಳ್ಳಬೇಕು. ಅಬೋಧ ಹೃದಯದ ಐಕ್ಯವೇ ಇದು. ಇಂತಹ ಐಕ್ಯವನ್ನು ಸಾಧಿಸಬೇಕಾದರೆ ಪ್ರತಿಯೊಬ್ಬ ಮನುಷ್ಯನು ಅವನ ಜಾತಿ ಯಾವದೇ ಆಗಲಿ ತಾನು ಹಿಂದು, ಮುಸಲ್ಮಾನ, ಕ್ರಿಶ್ಚನ್ ಮತ್ತು ಯಹೂದಿ ಮುಂತಾದವರ ಪ್ರತಿನಿಧಿಯೆಂದು ತಿಳಿಯಬೇಕು. ಸ್ವಲ್ಪದರಲ್ಲಿ ಹೇಳುವದಾದರೆ ಹಿಂದು ಮತ್ತು ಹಿಂದುಯೇತರ ಎಂದು ಭಾವಿಸಬೇಕು. ಇಂತಹ ಭಾವನೆಯನ್ನು ಬೆಳಿಸಬೇಕಾದ ಇತರ ಜಾತಿಯ ಜನರೊಡನೆ ಸ್ನೇಹ ಮಾಡಬೇಕು. ತನ್ನ ಧರ್ಮದಂತೆ ಇತರ ಧರ್ಮಗಳನ್ನು ಮನ್ನಿಸಬೇಕು.

ಕ:— ಉಳಿದ ಧರ್ಮಗಳನ್ನು ಅನುಸರಿಸಿದರ ಏನ ಬರತದ್ರಿ.

ಬು. ಮಾ:— ಅಂತಹ ಆನಂದದಾಯಕ ವಾತಾವರಣದಲ್ಲಿ, ಇದು 'ಹಿಂದುಗಳ ನೀರು ನೀರು' ಮತ್ತು ಮುಸಲ್ಮಾನರ ನೀರು! ಅಥವಾ ಹಿಂದುಗಳ ಚಹಾ ಮುಸಲ್ಮಾನರ ಚಹಾ ಎಂಬ ಕೂಗುಗಳು ಸ್ಟೇಶನ್ನಿನಲ್ಲಿ ಕೇಳ ಬರುವದಿಲ್ಲ. ಶಾಲೆ ಕಾಲೇಜುಗಳಲ್ಲಿ ಹಿಂದು ಮತ್ತು ಇತರ ಜಾತಿಯವರಿಗಾಗಿ ಪ್ರತ್ಯೇಕ ಕೋಣೆಗಳಿರುವದಿಲ್ಲ. ಹೀಗಾಗಿ ಜಾತಿವಾಚಕ ಶಾಲೆಗಳೂ, ಕಾಲೇಜುಗಳೂ ದವಾಖಾನೆಗಳೂ ಇರುವದಿಲ್ಲ. ಇಂತಹ ಹೃದಯದ ಐಕ್ಯವು ತರ್ಕ ಶುದ್ಧವಾಗಿದ್ದರೂ ಅದು ಅನೇಕರಿಗೆ ಆಶ್ಚರ್ಯಕರವೆಂದು ಕಂಡು ಬಂತೆನಪ್ಪಾ; ಅಂತಹ ಆಶ್ಚರ್ಯಕರವಾದ ಘಟನೆಗಳನ್ನೇ

ಗಾಂಧಿಯವರು ಕಾರ್ಯರೂಪದಲ್ಲಿ ತರಲು ಹೆಣಗಿದರು. ಅಂತಲೇ ಅವರು ನಮ್ಮಂತೆ ಸಾಮಾನ್ಯ ಪುರುಷರಲ್ಲ.

ಕ:— ಅಸ್ಪ್ರು ...... ಅಸ್ಪ್ರುಶ್ಯತಾ ಅಂತಾ ಏನೋ ಅಂತಾ ರಲ್ರಿ, ಅದೇನು ?

ಬು. ಮಾ:— ಅದೂ ಅವರ ವಿಧಾಯಕ ಕಾರ್ಯಕ್ರಮ ಗಳಲ್ಲಿ ಒಂದು. 'ಅಸ್ಪೃಶ್ಯತಾ ನಿವಾರಣೆ' ತಿಳಿಯಿತೇ! ಮುಖ್ಯ ವಾಗಿ ಹರಿಜನರ ಏಳ್ಗೆಗಾಗಿ ಹಿಂದು ಜನರು ಹೋರಾಡಬೇಕು. ಅಂದ್ರ ಸ್ವಾತಂತ್ರ್ಯದ ಹೊಸ ಗಾಳಿಯನ್ನ ಸೇವಿಸಲು ಅನಕೂಲ ಆಗತದ ಎಂದು ಅವರು ಎಷ್ಟೊ ಸಾರೆ ಹೇಳಿದ್ರು. ಆದರ ಹರಿ ಜನರೂ ತಮ್ಮ ಕರ್ತವ್ಯ ತಿಳಿದುಕೊಂಡು ಸಾಗಿದರs ಅವರ ಮಾತನ್ನ ತಾನೆ ಕಲ್ಯಾಣವಾಗತದ.

ಕ:— ಖರೇವು ನೋಡ್ರಿ. ಬಡವರ ತಂದೆ ಖರೆ ನೋಡ್ರಿ. ಅವರು ಮತ್ತ್ಯಾವನ್ನು ಬಡವರ ಕಲ್ಯಾಣಕ್ಕಾಗಿ ಮಾಡಿದ್ರು ಹೇಳ್ರಿ.

ಬು. ಮಾ:— 'ಪಾನ ನಿರೋಧ'-ಜಾತಿಯ ಐಕ್ಯ. ಅಸ್ಪೃ ಶ್ಯತಾ ನಿವಾರಣೆಗಳಂತೆ ಇದೂ ಒಂದು ಮುಖ್ಯ ನೋಡು. ಗಡಂಗ ........ ಗಡಂಗ ಗೊತ್ತಿಲ್ಲ! ಕುಡಿಯೋದನ್ನs ಬಂದ ಮಾಡೋದು. ನಮ್ಮ ದೇಶದಲ್ಲಿ ಮಾದಕ ಪೇಯ ಮತ್ತು ಪದಾರ್ಥಗಳ ಪಾಕದಲ್ಲಿ ಜರ್ಜರಿತರಾದ ಲಕ್ಷಾನುಲಕ್ಷ ಸ್ತ್ರೀ ಪುರುಷರು ಹಾಳಾಗುವದನ್ನು ನಾವು ನೋಡಿಲ್ಲ? ಆ ಅನಿಷ್ಟ ನಿವಾರಿಸಬೇಕಾದರೆ ನಮ್ಮ ವೈದ್ಯರು ಮುಂದೆ ಬರಬೇಕು. ಅವರು ಕುಡುಕರನ್ನು ಅಫೂ ಸೇವಿಸುವವರನ್ನೂ ಆ ಚಟಗಳಿಂದ ಪರಾವೃತ್ತಗೊಳಿಸಲು ಹೊಸ ಮಾರ್ಗ ಶೋಧಿಸಬೇಕು. ಮುಖ್ಯ ವಾಗಿ ನಮ್ಮಲ್ಲಿ ತ್ಯಾಗ ಬುದ್ಧಿ ಇರಬೇಕು ನೋಡು. ಅಂದರ ಈ ದುಶ್ಚಟಗಳು ತಮ್ಮಿಂದ ತಾವೇ ಓಡಿ ಹೋಗತಾವ.

ಕಲ್ಲಪ್ಪ:— ನಾನೂ ಮೊದಲ ಕುಡಿತಿದ್ದೆ ಗಾಂದೆಪ್ಪನ ಪುಣ್ಣೆದಿಂದ ಬಿಟ್ಟೆ ನೋಡ್ರಿ. ಹಾಳಾಗತಾರ್ರಿ.

ಬು. ಮಾ:— ಅದಕ್ಕ ಹೇಳೋದು ಕುಡಿ ಬ್ಯಾಡ್ರಿ ಎಂದು ಮತ್ತ ಕೇಳಿಲ್ಲ 'ಖಾದಿ ಪ್ರಸಾರ ಒಂದು ಮುಖ್ಯ.

ಕ:— ಖಾದಿ, ಖಾದಿ ಎಂದು ಏಟ ಸಾರೆ ಅಂತೀರೆಪ್ಪಾ. ಅದರಿಂದ ಏನು ಉಪಿಯೋಗ? ಚಕಮುಕ ರ್‍ಯಾಶ್ಮಿ ಉಣ್ಣೆನ ಪಾಡ ನೋಡ್ರಿ.

ಬು. ಮಾ:— ಎಂದು ಉಟ್ಟೆದ್ದೆಪ್ಪಾ ರೇಶ್ಮಿ ಅಂತ ರೇಶ್ಮಿ! ನಮ್ಮ ಹಿತಕಲ್ಲೋ ಇದು. ಬಡವರ ಹಿತಕ್ಕ. ಬಡವರಿಂದ ತುಂಬಿದ ಹಿಂದುಸ್ತಾನದ ಹಿತಕ್ಕ ತಿಳೀತ! ಖಾದಿ ಬಟ್ಟೆ ಅಂದರ ಬರೇ ಉರುಟು ಬಟ್ಟೆ ಎಂದು ತಿಳಿಯಬೇಡಾ. ಪೂರ್ಣ ಅರ್ಥ ತಿಳಕೊ! ಖಾದಿ ಅಂದರ ನೋಡಿದಲ್ಲೆಲ್ಲ ಸ್ವದೇಶಿ ವೃತ್ತಿ ಇರಬೇಕು. ಜೀವನಕ್ಕ ಯಾವ ಅವಶ್ಯ ಪದಾರ್ಥಗಳು ಬೇಕೋ ಅವೆಲ್ಲವೂ ನಮ್ಮ ದೇಶದಲ್ಲಿಯೇ ದೊರೆಯುವಂತೆ ಮಾಡಬೇಕು. ಹಳ್ಳಿಗರ ಬುದ್ಧಿ ಶಕ್ತಿಯಿಂದ ಅದನ್ನು ದೊರಕಿಸಲು ಸಹಾಯವಾಗುತ್ತದೆ. ಇದು ಖಾದಿಯ ಗುಟ್ಟು ತಿಳಿಯಿತು ಮತ್ತು ಪಂಡಿತ ಜವಾಹರಲಾಲರು ಹೇಳಿದಂತೆ 'ಖಾದಿ ಅಂದರೆ' ಹಿಂದೀ ಸ್ವಾತಂತ್ರ್ಯದ ಸಮವಸ್ತ್ರ ಆಗಿರುವದು.

ಕ :- ಹಳ್ಳಿಗಳಲ್ಲಿ ಮಾಡುವ ದಗದಗಳು ಇನ್ಯಾವ ಅದಾವ್ರಿ ?

ಬು. ಮಾ:— ಮಾಡಬೇಕಂದರ ಬೇಕಾದಷ್ಟು ಅವ. ಆ ಉದ್ಯೋಗಗಳು ಖಾದಿಗೆ ಸಹಾಯಕವಿರುವವು. ಖಾದಿಯ ಹೊರತು ಇವು ಬದುಕಲಾರವು. ಮತ್ತು ಇವು ಇಲ್ಲದಿದ್ದರೆ ಖಾದಿಯ ಪ್ರತಿಷ್ಠೆ ಆಗಲಾರದು. ಅವು ಕೈಯಿಂದ ಬೀಸುವದು ಕುಟ್ಟುವುದು, ಸಾಬಾಣ ತಯಾರಿಸುವುದು ಕಾಗದ ಮಾಡುವುದು, ಬೆಂಕಿ ಕಟ್ಟಿಗೆಗಳನ್ನು ಸಿದ್ಧ ಪಡಿಸುವುದು ತೊಗಲು ಹದ ಮಾಡುವುದು ಮುಂ.

ಕಲ್ಲಪ್ಪ:— ಇಷ್ಟೆಲ್ಲಾ ಆತರಿ ಅಕ್ಷರ ವಿದ್ಯಾರ್ರಿ?

ಬು. ಮಾ:— 'ಪ್ರೌಢಶಿಕ್ಷಣ' ಎಂದು ಗೊತ್ತಿಲ್ಲ ನಿನಗ ಈಗ ಮುದುಕರಿಗೆ ಕೂಡಾ ಕಲಿಸಲಿಕ್ಕೆ ಹತ್ಯಾರ.

ಕಲಿಯೋಣು ಬಾರೊ, ಕಲಿಯೋಣು ಬಾ.

ಪಾಟಿ ಪೇನಾ ಬುಕ್ಕ ಹಿಡಿಯಬೇಕೊ ಬೆಶಕ್, ಕಲಿಯೋಣು ಬಾ! ಅಂತ ಗಾಂಧಿಯವರಿಗೆ ಹಳ್ಳಿಗಳ ಸ್ವಭಾವ ಪೂರ್ಣ ತಿಳಿದಿತ್ತು. ಅದಕ್ಕ ಅವರಲ್ಲಿಯ ಅಜ್ಞಾನವನ್ನು ಹೋಗಲಾಡಿಸಲು ಬಾಯಿ ಮಾತಿನಿಂದ ಪ್ರೌಢರಿಗೆ ರಾಜಕೀಯ ಶಿಕ್ಷಣ ಕೊಡಬೇಕು. ಬಾಯಿ ಮಾತಿನ ಶಿಕ್ಷಣದ ಜೊತೆಗೆ ಓದು ಬರಹವನ್ನು ಪ್ರಾರಂಭಿಸಬೇಕು. ಅಂಧರ ನಿಮ್ಮನ್ನೆಲ್ಲಾ ಜ್ಞಾನಿಗಳನ್ನಾಗಿ ಮಾಡಲು ಬರುವುದು. ಇದರಂತೆ **ಮೂಲ ಶಿಕ್ಷಣವನ್ನು** ಹಳ್ಳಿಯ ಬಾಲಕರಿಗೆ ಆಗಲಿ ಪಟ್ಟಣದ ಬಾಲಕರಿಗೆ ಆಗಲಿ ಕೊಟ್ಟರೆ ಹಿಂದುಸ್ತಾನದಲ್ಲಿಯ ಉತ್ತಮ ಹಾಗೂ ಶಾಶ್ವತವಾದ ವಿಷಯಗಳ ಜ್ಞಾನ ಅವರಿಗೆ ಆಗತದ. ಬಾಲಕರು ಮುಂದಿನ ಹಿಂದುಸ್ತಾನದ ಸಂಪತ್ತು. ಆದ್ದರಿಂದ ಈ ಮೂಲಶಿಕ್ಷಣದಿಂದ ಅವರನ್ನು ತಯಾರಿಸಲು ಸಹಾಯವಾಗುವುದು.

ಕಲ್ಲಪ್ಪ:— ನಮ್ಮದ ನಮ್ಮ ಮಕ್ಕಳದು ಆತ್ರೆ ನಮ್ಮ ಹೆಂಗಸರ ಪಾಡೇನ್ರಿ?

ಬು. ಮಾ:— ಕಲ್ಲಪ್ಪ, ನೀ ಬಲೆ ರಸಿಕ ನೋಡು; ಹೆಂಗಸರನ್ನು ಸುಧಾರಿಸಲು "ಮಹಿಳಾ ಉದ್ಧಾರ" ಎಂಬುದೂ ಆ ವಿಧಾಯಕ ಕಾರ್ಯಕ್ರಮದಲ್ಲಿದೆ. ಸ್ವರಾಜ್ಯ ಹೋರಾಟದಲ್ಲಿ ಅವರು ಸಮಭಾಗಿಗಳೆಂದು ತಿಳಿಯಬೇಕು. ಸ್ತ್ರೀಯರನ್ನು ಹಳೇ ಕಾಲದ ಗುಲಾಮರಂತೆ ನಡಿಸಿಕೊಳ್ಳದೆ-ಅವರೂ ನಮ್ಮ ಸಹೋದ್ಯೋಗಿಗಳು. ಮಿತ್ರರು ಎಂದು ತಿಳಿದುಕೊಂಡು ಅವರು ಕೇವಲ

ಆಟದ ಗೊಂಬೆ ಇಲ್ಲವೇ ಭೋಗ ವಸ್ತುಗಳೆಂದು ತಿಳಿದುಕೊಳ್ಳದೆ, ಸನ್ಮಾನ್ಯ ಸ್ನೇಹಿತರೆಂದು ತಿಳಿದುಕೊಳ್ಳಬೇಕೆಂದು ತಿಳುಹಿ ಮಹಿಳೆಯ ಉದ್ಧಾರ ಗೈಯ್ಯಲು ಹೆಣಗಿದರು. ಅಲ್ಲಾ ಕಲ್ಲಪ್ಪಾ ನಿನ್ನ ಹೇಣತಿ ನಿನ್ನ ಆಳತಾಳೇನು? ಒಟ್ಟಿನ ಮೇಲೆ ಸ್ತ್ರೀಪುರುಷರು ಸಹಕಾರ ಪರಸ್ಪರ ವಿಚಾರ ವಿನಿಮಯದಿಂದ ನಡೆದುಕೊಂಡರೆ ಸಮಾಜವು ತಾನೇ ಸುಧಾರಿಸುವುದು ನೋಡು.

ಕಲ್ಲಪ್ಪ:— "ವಿದ್ಯಾ ಆತ್ರಿ ಆರೋಗ್ಯಕೇನು ಮಾಡಬೇಕರಿ?"

ಬು. ಮಾ:— ಹಳ್ಳಿದು ಆರೋಗ್ಯ ರಕ್ಷಣೆ ಮಾಡುವುದು ಮೊದಲು ಮುಖ್ಯವಾದದ್ದು. ಹಳ್ಳಿಗಳು ಸಗಣಿಯ ತಿಪ್ಪೆಗಳಾಗದಂತೆ, ಕುಡಿಯುವ ನೀರಿನಲ್ಲಿ ಸ್ನಾನ ಮಾಡುವದನ್ನು ನಿಲ್ಲಿಸಬೇಕು. ಇದಲ್ಲದೆ ಆರೋಗ್ಯ ಜ್ಞಾನದ ವಿಷಯವಾಗಿ ಜನರಿಗೆ ಸರಿಯಾದ ಜ್ಞಾನವಾದರೆ ಮರಣದ ಸಂಖ್ಯೆಯನ್ನು ಕಡಿಮೆ ಮಾಡಬಹುದು.

ಕಲ್ಲಪ್ಪ: — 'ಆರೋಗ್ಯ' 'ವಿಜ್ಞಾನ' ಅಂದರೆನ್ರಿ?

ಬು. ಮಾ:— ಅವು ಯಾವು ಅಂದರೆ:— (೧) ಒಳ್ಳೇ ವಿಚಾರಗನನ್ನೇ ಮಾಡಬೇಕು. ದುಷ್ಟ ವಿಚಾರ ಮತ್ತು ಕೆಲಸವಿಲ್ಲದ ವಿಚಾರಗಳನ್ನು ಎಂದೂ ತಲೆಯಲ್ಲಿ ತುಂಬಿಕೊಳ್ಳಬಾರದು. (೨) ಹಗಲು ಮತ್ತು ರಾತ್ರಿಯಲ್ಲಿ ಶುದ್ಧವಾದ ಹವೆಯನ್ನು ಸೇವಿಸಬೇಕು. (೩) ದೈಹಿಕ ಮತ್ತು ಬೌದ್ಧಿಕ ಕೆಲಸಗಳಲ್ಲಿ ಸಮತೂಕ ಇರಬೇಕು. (೪) ನೀಟಾಗಿ ನಿಲ್ಲರಿ ಮತ್ತು ನೀಟಾಗಿ ಕುಳಿತುಕೊಳ್ಳಿರಿ. ಮತ್ತು ಪ್ರತಿಯೊಂದು ಕೆಲಸವನ್ನು ನಿರ್ಮಲವಾಗಿ ಓರಣದಿಂದಲೂ ಮಾಡಬೇಕು. ನೆರೆಯವರ ಸೇವೆಗಾಗಿ ಬದುಕಲು ಆಹಾರ ಸೇವಿಸಿರಿ. ಭೋಗ ಲಾಲಸೆಗಾಗಿ ಜೀವಿಸಬಾರದು.

ಕಲ್ಲಪ್ಪ:— ಇವು ಎಷ್ಟು ಕಠಿಣ ಮತ್ತು ಸುಲಭ ಅದಾವರಿ?

ಬು. ಮಾ:— ಇವು ಸುಲಭ ಕಂಡರೂ ಅವುಗಳಂತೆ ವರ್ತಿ

ಸುವುದು, ಬಹಳ ಕಠಿಣ. ಆದರೆ ಗಾಂಧಿಯವರು ಮಾತ್ರ ಹಾಗೆ ವರ್ತಿಸಿದರು ನೋಡು.

ಕಲ್ಲಪ್ಪಃ— ಎಷ್ಟು ಕಷ್ಟ ಪಟ್ರು ಎಪ್ಪಾ ಗಾಂಧೆಪ್ಪನವರು ನಮ್ಮ ಸಲುವಾಗಿ.

ಬು. ಮಾಃ— ಬರೇ ಅಷ್ಟೇ ಅಲ್ಲ ಕಲ್ಲಪ್ಪಾ, ಅವರು ತಮ ಗಾಗಿ ಬಾಳಲಿಲ್ಲ. ಇತರರ ಮೇಲ್ಮೆಗಾಗಿಯೇ ಅವರು ತಮ್ಮ ಬಾಳುವಿಕೆಯನ್ನು ಆದ್ಯಂತವಾಗಿ ಮೀಸಲಾಗಿದ್ದರು. ಇಂತಹ ಮಹಾ ತ್ಯಾಗ ಮೂರ್ತಿಯನ್ನು ಚಿರಕಾಲ ಸ್ಮರಿಸಬೇಕು. ಕೇವಲ ಅವರು ಹುಟ್ಟು ದಿನ ಆಚರಿಸಿದರೆ ಸಾಲದು. ಅವರ ಸತ್ಯ ಸಂಕಲ್ಪವನ್ನು ಅನುದಿನವೂ ಅಂತ್ಯಂತ ಪ್ರೀತ್ಯಾದರ ಗೌರವಗಳಿಂದ ಪ್ರತಿಯೊ ಬ್ಬರೂ ಆಚರಣೆಯಲ್ಲಿ ತರುವದರಿಂದ ಮಾತ್ರ ಮಹಾತ್ಮರಿಗೆ ಅನು ರವಾದ ಕೀರ್ತಿ ಲಭಿಸಿ, ಅವರು ಕೊಟ್ಟಂಥ ಸ್ವಾತಂತ್ರ್ಯದ ಸಾರ್ಥ ಕತೆ ಆಗತದ ತಿಳೀತ಼ ಇದು ಅವರ ಪವಿತ್ರ ಗುಟ್ಟು.

ಕಲ್ಲಪ್ಪಃ— ಮಾಸ್ತರ಼ ಗಾಂಧಿಯವರ ನಿಜವಾದ ಗುಟ್ಟು ತಿಳಿಸಿ ಬಹಳ ಉಪಕಾರ ಮಾಡಿದಿರಿ. ಈ ದಿನ ನಾನು ಧನ್ಯನಾದೆ ನೋಡ್ರಿ. ಜೀವನಸುಖ ಆಗಬೇಕಾದರ಼ ಭೂಮಿಯ ಮೇಲೆ ಬಂದು, ಆದಕ್ಕೆ ಭಾರ ಆಗದ ದುಡಿಯಬೇಕು. ಅಂತಾ ತಿಳೀತು ನೋಡ್ರಿ.

ಬು. ಮಾ:— ಇದ಼ ಬೇಕಾಗೇದ ನೋಡು, ನಿನ್ನಂತೆ ಎಲ್ಲಾ ಹಳ್ಳಿಗರು ಸುಧಾರಿಸಿದರ ಕೇಳತೇನು ಹಿಂದುಸ್ತಾನದ ಕೈ ಹಿಡಿಯಲು ಯಾರಿಗೂ ಸಾಧ್ಯವಿಲ್ಲ ! ಆ ದಿನವೇ ಗಾಂಧಿಯವರ ಪುನರಾವತಾರ ಆತಂತ ತಿಳಿ.

**( ಆ ಮೇಲೆ ಇಬ್ಬರೂ ಮೊದಲು ನೋಡಿದ ಗಾಂಧಿಯವರ ಚಿತ್ರಕ್ಕೆ ಪೂಮಾಲೆಗಳನ್ನು ಅರ್ಪಿಸಿ ತಮ್ಮ ತಮ್ಮ ಮನೆಗೆ ತೆರಳುವರು.)**

---

# ಅಜಿತನ ಶಿಸ್ತು



ಪಾತ್ರಗಳು:— ೧) ಅಜಿತ. ೨) ಅಜಿತನ ತಂದೆ.
೩) ಅಜಿತನ ತಾಯಿ. ೪) ಅಜಿತನ ಗುರುಗಳು.

[ಅಜಿತನ ತಾಯಿ ಮುಂಜಾವು ನಸುಕಿನಲ್ಲಿ ಆತನನ್ನು ಎಬ್ಬಿಸುತ್ತ] 'ಏಳು ಮಗು, ಎಷ್ಟೊತ್ತು ಮಲಗೋದು. ಗುಬ್ಬಿ 'ಚಿಂ, ಚಿಂ' ಅನ್ನುತಾವ್ತ ಇವೆ. ಕಾಗೆ 'ಕಾ-ಕಾ' ಎನ್ನುತಾವ್ತ ಇವೆ.

ಅಜಿತಃ— ಉಂ. ಹೂ. ಉಂ. ಹೂ–ಏಳೋದಿಲ್ಲ.

ತಾಯಿಃ— [ಹಾಡಲು ಸುರುವು ಮಾಡಿ] ಹಾಗಾದರೆ ಹಾಡಲೇ, ಅಂದ್ರೆ ಏಳತಿಯಾ? [ಹಾಲಿಗೆ ಸಕ್ಕರಿ ಹಾಕುತ್ತ] ತಿಳೀತು ನಿನ್ನ ಒಳಗಿನ ಗುಟ್ಟು.

ಭರದಿಂದ ಬಾರಪ್ಪಾ ಸಕ್ಕರಿ ಹಾಕುತಿನೀ!
ಚಂಚೆಂಕಾ ಇಟ್ಟೆ ಬಿಟ್ಟೇನಿ.

[ಅಜಿತ ಹಾಲು ಕುಡಿಯಲು ಧಾವಿಸುವ]

ತಾಯಿಃ— ಹಾಗಲ್ಲ ಅಜಿತ, ಮೊದಲು ಮುಖ ತೊಳಿದುಕೊ, ಹಲ್ಲು ತಿಕ್ಕೊ. ಆ ಮೇಲೆ ಹಾಲು ಕುಡಿ ತುಂಬಾ ಸಿಹಿ ಹತ್ಯಾವ.

ಅಜಿತಃ— ಹೌದು ಅವ್ವಾ, ನೀರು ಕೊಡು ಮುಖ ತೊಳಿಯಲು.

ತಾಯಿಃ— ಬಚ್ಚಲ ಮನಿಯೊಳಗ ನೀರು ಇಟ್ಟೇನಿ ಹೋಗಿ ತೊಳಕೊಂಡು ಬರಬೇಕು.

( ಅಜಿತ ಆ ಪ್ರಕಾರ ಮುಖ ತೊಳೆದುಕೊಂಡು ಹಾಲು ಕುಡಿಯಲು ಧಾವಿಸುವ. )

ತಾಯಿ:— ಎಷ್ಟು ಅವಸರ, ಅಜಿತಾಃ ನಿಮ್ಮ ಸಾಲಿಯೊಳಗ ಈ ಹಾಡಾ ಕಲಿಸಿಲ್ಲೇನು?

ಎದ್ದು ಬೇಗನೆ ಮೋರೆ ತೊಳಿಯಿರಿ
ಬುದ್ಧಿ ಕೊಡುವ ದೇವನಂ ಬಿಡದೆ ನಮಿಸಿರಿ ||

ಅದಕ್ಕ ಮೊದಲು ದೇವರಿಗೆ ಕೈ ಮುಗಿ ಎನ್ನಲು ಮಗು ಒಳ್ಳೆ ವಿನಯದಿಂದ ದೇವರಿಗೆ ಕೈ ಮುಗಿಯುವನು. ತಾಯಿಯ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಅಜಿತನಿಗೆ ಹಾಲನ್ನು ಕೊಟ್ಟು ಪಾಟಿ, ಪೇನಾ ಬುಕ್ಕಗಳನ್ನು ಕೊಡುತ್ತಾ, ಅಂಗಿ, ಚೊಣ್ಣ ಗಾಂಧಿ ಟೊಪ್ಪಿಗೆ ಹಾಕಿ ಶಾಲೆಗೆ ಕಳಿಸುತ್ತ "ದಿನಾಲು ಹೀಗೆ ಮಾಡಬೇಕೆಂದು" ಹೇಳಿದಳು.

× × × ×

ಅಜಿತ ಶಾಲೆಗೆ ಬರುವ. ಆತನ ಓರಗೆಯ ಗೆಳೆಯರಾದ ಕಲ್ಲ, ಮಲ್ಲ, ಮಧುಸೂದನಾ, ನಾರಾಯಣ, ಎಲ್ಲರೂ ಒಬ್ಬರಿಗೊಬ್ಬರು ಓಣಿಗುಂಟ ಹೊಡೆಯುತ್ತ, ಬಡಿಯುತ್ತ, ಹುಣಸಿ ಹಣ್ಣಿನ ಗಿಡಕ್ಕೆ ಕಲ್ಲುಗಳನ್ನ ತೂರುತ್ತಾ ಸಾಲೆಯ ಹೊರಗೆ ಧಾಂದಲೆ ಹಾಕತಾ ಇದ್ದರು.

ಆಗ ಮಾಸ್ತರರು ಬಂದುಃ— ಏ! ಏನ ನಡಿಸೀರಿ ಗದ್ದಲಃ ಘಂಟೆ ಆದದ್ದು ಕೇಳಿಸೋದಿಲ್ಲ ನಿಮಗಃ. ಬರ್ರಿ ಒಳಗಃ. ನೋಡಿರಿ, ಅಜಿತನ್ನಃ ಎಷ್ಟು ಶಿಸ್ತಾಗಿ ಬಂದಾನ ಶಾಲೆಗೆ ಅವನನ್ನು ನೋಡಿ ಸ್ವಲ್ಪ ಬುದ್ಧಿ ಕಲಿಯಿರಿ.

( ಎಂದು ಗದ್ದರಿಸಲು ಹುಡುಗರು ಒಳಗೆ ಬರುವರು. )

ಮಾಸ್ತರು ಶುದ್ಧ ಬರಹ ಹೇಳಲು ಎಲ್ಲರೂ ಬರೆಯಲು ಸುರುವು ಮಾಡುವರು. ಅವರಲ್ಲಿ ಒಬ್ಬಿಬ್ಬರು ಬರಿಯುವುದನ್ನು ಬಿಟ್ಟು ಮಾಸ್ತರರ ಜೊಂಡಿಗೆ ಮೀಸೆ ನೋಡುತ್ತ ಕಿಲಿಕಿಲಿ ನಗುವುದು, ಗೋಟಿ ಆಡುವುದನ್ನು ನೋಡಿ ಅಜಿತನಿಗೆ ಇದು ಸರಿ ಬಾರದೆ ಮಾಸ್ತರರಿಗೆ ಹೇಳಿದ.

ಆಗ ಮಾಸ್ತರ:— ಏನು ಕಲ್ಲ ಇದ್ದೀರಪ್ಪಾ ನೀಟಾಗಿ ಕುಳಿತುಕೊಳ್ಳಿರಿ. ನಾ ಹೇಳಿದ ಹಾಗೆ ಒಂದೊಂದೇ ಅಕ್ಷರ ಬರೆಯಿರಿ:—

ಮುಂಜಾವಿನಲ್ಲಿ ನಸುಕಿನಲ್ಲಿ ಏಳಬೇಕು.
ಚನ್ನಾಗಿ ಮೋರೆ ತೊಳೆಯಬೇಕು.
ಆ ಮೇಲೆ ದೇವರಿಗೆ ನಮಸ್ಕಾರ ಮಾಡಿ
ನಾವು ಹೇಳಿದ ಪಾಠ ಕಲಿಯಬೇಕು.

ಅಜಿತಃ— (ಮುಂಜಾನೆ ತಾಯಿ ಹೇಳಿದ ಮಾತನ್ನು ನೆನಪಿಗೆ ತಂದು) ಹೌದ್ರಿ ಮಾಸ್ತರು, ನಮ್ಮ ತಾಯಿ ದಿನಾಲು ಇದನ್ನಃ ಹೇಳತಾಳ ನೋಡ್ರಿ.

ಮಾಸ್ತರಃ— ಎಷ್ಟು ಮುದ್ದಾಗಿ ಮಾತಾಡಿದಿ ಅಜಿತ, ಇರಲಿ. ಮಕ್ಕಳೇ, ಗೊತ್ತಿಲ್ಲವೇ 'ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿಯಿಲ್ಲ' ಎಂಬುದು? ಎಲ್ಲವೂ ತಾಯಿಯ ಮೇಲೆಯೇ ಮುಖ್ಯ ಅವಲಂಬಿಸಿರೋದು. ಅವಳು ಮಕ್ಕಳನ್ನು ಕಾಪಾಡಿ ಪಾಠ ಕಲಿಸುವುದರಲ್ಲಿ ಮುಖ್ಯ ಗುರುವು. ನನಗೆ ಬುದ್ಧಿ ಬಂದದ್ದು ಆ ತಾಯಿಯಿಂದಲೇ. ನೀವಾದರೂ ನಿಮ್ಮ ತಾಯಿಯ ಮಾತನ್ನು ಕೇಳಿ ನಡಿದುಕೊಳ್ಳಬೇಕು. ಆ ಮೇಲೆ ಯಾವಾಗ ಶಾಲೆಗೆ ಬರುವಿರೋ ನಾವು ಅಂದ್ರೆ ಮಾಸ್ತರರು ಹೇಳಿದಂತೆ ಕೇಳಿವರೆ, ನೀವೂ ಜಾಣರಾಗಿ ಮುಂದೆ ದೊಡ್ಡ ಮನುಷ್ಯರಾಗುತ್ತೀರಪ್ಪಃ.

ಬೇಗದಿಂದಲಿ ಬೆಳಕು ಹರಿಯುತ ತಟ್ಟನೇಳಲೊ ರಂಗನೇ ।
ಹೋಗಿ ಶಾಲೆಗೆ ತಪ್ಪದಲಿ ಕಲಿ ನಿನ್ನ ಪಾಠನ ರಂಗನೇ ॥ ೧ ॥

ಅಕ್ಕ ಹೇಳಿದ ಮಾತು ಲಾಲಿಸು ಬಿಟ್ಟು ಬಿಡದಲಿ ರಂಗನೇ ।
ಚೊಕ್ಕ ತನದಲಿ ನಿನ್ನ ವಸ್ತ್ರವ ಇಟ್ಟುಕೊಳ್ಳಲೋ ರಂಗನೇ ॥ ೨ ॥

ಜಗಳ ಗಂಟನು ಜಗಳ ತಗೆಯುವ ಮಾತು ಮಾತಿಗೆ ರಂಗನೇ ।
ರೇಗದಿರು ನೀನವನ ಮಾತಿಗೆ ಸುಮ್ಮನಾಗೇಲೊ ರಂಗನೇ । ॥ ೩ ॥

ಜಗದ ಪಾಲಕ ರಾಮಚಂದ್ರನು ಮರೆಯ ಬೇಡಲೋ ರಂಗನೇ ।
ಜಗದ ಅಂಬೆಯು ಕುಲದೇವತೆ ನಿತ್ಯ ಭಜಿಪೆಲೋ ರಂಗನೇ ॥ ೪ ॥

ಎಂದು ಬೋಧಿಸಲು ಅಜಿತ ಗೆಳೆಯನಿಗೆ ಗುಟ್ಟದ್ದು ಸೆನ ಪಾಗಿ ಬಿಕ್ಕಿ ಬಿಕ್ಕಿ ಅತ್ತು, ಮುಂದೆ ಯಾವ ಗೆಳೆಯನಿಗೂ ಹೊಡೆ ಯದೆ ಗುರುಗಳು ಹೇಳಿದಂತೆ ತನ್ನ ಪಳದಲ್ಲಿ ಎಲ್ಲರಿಗೂ ಪಾಠ ಹೇಳುತ್ತ, ಶಿಸ್ತಿನಲ್ಲಿ ಒಂದನೇ ನಂಬರು ಪಡೆದ, ಮತ್ತು ಎಲ್ಲೆಲ್ಲೂ ಶಿಸ್ತಿನ ಪಾಠ ಹೇಳಬೇಕಾಗಿದ್ದಲ್ಲಿ ಅಜಿತನ ಹೆಸರನ್ನು ಮಾಸ್ತರರು ಉದಾರಿಸುವಂತಾಯಿತು.



# ನಾಡ ಹಬ್ಬ.

( ತೆರೆಯ ಮರೆಯಲ್ಲಿ ) ಅದೋ ! ಅತ್ತ ನೋಡಿ ಮುಂಜಾವು. ನಸುಕಿನ ಸೂರ್ಯನ ಹೊಂಬಣ್ಣದ ಕಿರಣಗಳು ಮಿಂಚುತ್ತಲಿವೆ. ಅದೇನು ? ಮಹಿಷಾಸುರ ಮರ್ದಿನಿ, ಚಾಮುಂಡಿ ಮುಂತಾದ ದೇವಾಲಯಗಳಲ್ಲಿ ಚೌಗಡದ ನಿನಾದ. ಇಂಪಾಗಿ ಕೇಳಿಸುತ್ತಿರುವುದಲ್ಲ. [ ಚೌಗಡದ ಸಪ್ಪಳ ಮಾಡಬೇಕು. ]

ಓಹೋ! ನಡೆಯಿರಿ ಮೊದಲು ಶಕ್ತಿದೇವಿಯ ದರ್ಶನವನ್ನು ಪಡೆಯಲು, ( ಎಂಬ ಧ್ವನಿಯು ಹಿಂಬದಿಯಲ್ಲಿ ಹೇಳಿದಂತೆ ಆಗುವುದು. )

ನಾವೆಲ್ಲರೂ ಗುಡಿಯನ್ನು ಪ್ರವೇಶಿಸುವಾ. ಎಷ್ಟು ಪವಿತ್ರವಾದ ವಾತಾವರಣವಲ್ಲಿ! ಎಲ್ಲರೂ ಎರಡೂ ಬದಿಗೆ ಸಾಲಾಗಿ ನಿಂತಿರುವರು! ಗರ್ಭ ಗುಡಿಯಲ್ಲಿ ನಂದಿನಿ ಹಾಡುತ್ತಿದ್ದಾಳೆ:— ... “ ಶಕ್ತಿಡೆ! ” ಎಂದು, ಅಲ್ಲಿ ನಿಂತ ಜನರೆಲ್ಲ ಒಳ್ಳೇ ಭಕ್ತಿಯಿಂದ ಆ ಹಾಡನ್ನು ಕೇಳಿ ತಾವೂ ಶಕ್ತಿದೇವಿಗೆ ಪ್ರಾರ್ಥನೆ ಸಲ್ಲಿಸಿ ಒಂದೊಂದು ಕನಸನ್ನು ಕಾಣುತ್ತಾ ಮನೆಗೆ ತೆರಳುವರು.

ನಂದಿನಿಯು ತನ್ನ ಮಗನಾದ ಆನಂದನ ಬಗ್ಗೆ ಒಂದು ಒಳ್ಳೇ ಕನಸನ್ನು ಕಂಡು ಆತ ಮುಂದೆ ಒಳ್ಳೇ ಪಂಡಿತನಾಗಿ ಎಲ್ಲ ಜನರ ಪ್ರೇಮಕ್ಕೆ ಪಾತ್ರನಾಗಿ ತನ್ನ ವಂಶವನ್ನು ಬೆಳಗಿಸಲಿ ಎಂದು ದೇವರಲ್ಲಿ ಬೇಡಿಕೊಂಡು ತನ್ನ ಮನೆಗೆ ತೆರಳುವಳು.

× × × ×

ಇದೋ ಇತ್ತ ನೋಡಿ! ಶಾಲೆಯ ಬಾಲಕರ ಕಲಕಲಾಟ! ಎಲ್ಲರೂ ಸಡಗರದಿಂದ ಬಂದಿದ್ದಾರೆ. ಹಬ್ಬ ಶಾಲೆಗೆ ಸೂಟಿ ಎಂದು ಎಷ್ಟು ಆನಂದ ಅವರಿಗೆ.

ಬುದ್ಧಯ್ಯ ಮಾಸ್ತರು:— ಮಕ್ಕಳೇ, ನಾನೊಂದು ಹಾಡು ಹಾಡತೀನಿ ಕೇಳಿ. (ಎನ್ನಲು ಎಲ್ಲರೂ ಮಾಸ್ತರ ಸುತ್ತ ನೆರೆಯುವರು.) ಕೇಳಿ ಇಲ್ಲೆ:—

ಬನ್ನಿರಿ ಬಾಲರೆ ಮೋದದಲಿ
ಚಿನ್ನರೆ ಬಲು ಬಲು ಬೇಗದಲಿ
ಗಜಮುಖ ಗಣಪನ ಕಾಣಲೂ
ವಿಜಯದಿ ದಾಸ್ಯವ ನೀಗಲೂ
ದೇಶವ ದೆಲ್ಲವ ದಾಸ್ಯವ
ನಾಶಿಸು ಜಗದಲಿ ತೋರು ದಯಾ
ಭೋನಂದನ! ಭೋ ಗಣಪಾ! ......

ಆ ಹುಡುಗರಲ್ಲಿ ಆನಂದ (ಎದ್ದು ನಿಂತು):-

ಏನ್ರಿ ಮಾಸ್ತರ ಮೊನ್ನೆ ಗಣೇಶ ಚತುರ್ಥಿ ಆಗಿಹೋತು. ಇನ್ನ ಮ್ಯಾಲೆ ಏನು ಮಾಡೋದ್ರಿ ಆ ಪದವನ್ನ? ಮೇಲಾಗಿ ನಾ ಬರೆದ ಒಂದು ನಾಟಕ ಮಾಡಬೇಕು ಅಂತಾ ರೇಡಿಯೋ ಸ್ಟೇಷನಕ್ಕೆ ಹೋಗಿದ್ದೆ. 'ಅದು ಆಗಿ ಹೋತು ಇನ್ನೇನು ಮಾಡೋದು, ಅಂದ್ರು!

ಬು. ಮಾ:— ಭಲೆ ಆನಂದ! ಹಾಂಗ ನಿರುತ್ಸಾಹ ಪಡಬೇಡಾ. ಈ ದಿನ ನಾಡ ಹಬ್ಬ ಇದ್ದರೆ ಏನಾಯಿತು! ಎಲ್ಲ ವಿಘ್ನಗಳನ್ನು ದೂರ ಮಾಡುವ ಆ ಗಣೇಶನನ್ನು ನಾವು ನೆನೆಯಲೇಬೇಕು. ಮತ್ತು ಆತನು ನಮಗೆಲ್ಲರಿಗೂ ವಿದ್ಯಾ-ಬುದ್ಧಿ ಕೊಡುವ ದೇವರು ಅಂತಾ ನಿನಗ ಗೊತ್ತಿಲ್ಲ.

ಆನಂದ:— ಹೌದ್ರಿ ಮಾಸ್ತರ, ನಾವೆಲ್ಲಾ ಕೂಡಿ ಹಾಡೋಣ ಏನ್ರಿ ಆ ಪದಾ?

ಬು. ಮಾ:— ತಡೀ ಹಾಡಿರಂತಃ! ಮತ್ತ ಕೇಳ್ರಿ. ನಮ್ಮದು ಕನ್ನಡ ನಾಡು.

ಆನಂದ:— ಯಾರ ಅಲ್ಲಂತಾರ್ರಿ ಮಾಸ್ತರs ?

ಬು. ಮಾಃ— ಮೊದಲು ಕೇಳೊ ಇಲ್ಲಿ ನಾವು ಕನ್ನಡಿಗರು. ನಮ್ಮ ಕನ್ನಡ ನಾಡಹಬ್ಬವೆಂದರೇ ನವರಾತ್ರಿ. ಆಶ್ವಯುಜ ಶು. ಪ್ರ. ಪದೆಯಿಂದ ವಿಜಯ ದಶಮಿ ಮುಗಿಯುವ ವರೆಗೆ ಈ ಕಾಲದಲ್ಲಿ ಈ ಹಬ್ಬವನ್ನು ಏಕೆ ಮಾಡುವರು ಬಲ್ಲಿರಾ?

ಹುಡುಗರುಃ— ಇಲ್ರಿ ಪೂರ್ಣ ಹೇಳ್ರಿ ಮಾಸ್ತರs.

ಬು. ಮಾಃ— ಕನ್ನಡಿಗರು ಶಕ್ತಿ ದೇವಿಯ ಉಪಾಸಕರು. ಆದುದರಿಂದಲೇ ನಮ್ಮ ಹಿಂದಿನ ಅರಸು ಮನೆತನಗಳಲ್ಲಿ ಶಕ್ತಿಯೇ ಕುಲದೇವತೆಯಾಗಿರುವಳು. ಈ ಶಕ್ತಿದೇವತೆ ಮಹಿಷಾಸುರ ಮರ್ದಿಸಿ, ಚಾಮುಂಡಿ ಮುಂತಾದ ರೂಪದಲ್ಲಿ ಭೂಮಿಗೆ ಬಂದುದು ಇದೇ ನವರಾತ್ರಿ ಕಾಲದಲ್ಲಿ. ಆದ್ದರಿಂದ ಮಕ್ಕಳೇ ನೀವೆಲ್ಲರೂ ಈ ದೇವಿಯ ಚಿತ್ರಕ್ಕೆ ನಮಸ್ಕರಿಸಿರಿ.

ಎಲ್ಲರೂ ನಮಸ್ಕರಿಸುವರು. ಒಬ್ಬರಿಗೊಬ್ಬರು 'ಬನ್ನಿ' ಯನ್ನು ಕೊಟ್ಟು ಆನಂದದಿಂದ ಮನೆಗೆ ತೆರಳುವರು.

× × × ×

ಊರಲ್ಲಿ ಸಂಜೆಯ ಮುಂದೆ ಎತ್ತ ನೋಡಿದತ್ತ ಜನರೇ ಜನರು! ಅಲ್ಲಿ ನೋಡಿ. ದೇವರ ಪಲ್ಲಕ್ಕಿ ವಾದ್ಯ ವೈಭವದೊಡನೆ ( ಹಾಗೆ ಧ್ವನಿಯಾಗುವುದು. ) ಸೀಮೋಲಂಘನ ಮಾಡಿ, ಬನ್ನಿ ಮುಡಿಯಲು ಹೊರಟಿದ್ದಾರೆ. ಮ್ಯುನಿಸಿಪಾಲಿಟಿಯಲ್ಲಿ ಮಹಾನುಭಾವರೊಬ್ಬರ ಭಾಷಣ ನಡಿದಿದೇ—

ಈ ಹಬ್ಬದಲ್ಲಿ ಒಬ್ಬರಿಗೊಬ್ಬರು ಬಂಗಾರ ಕೊಟ್ಟು ಕುಲು ಕುಲು ನಗುತ್ತಿರುವ ನೋಟವು ಕಣ್ಣಿಗೆ ಹಬ್ಬವೇ ಸರಿ! ಬನ್ನಿ ಮುಡಿದು ಮನೆಗೆ ಬರುತ್ತಿರುವ ಅಣ್ಣ ತಮ್ಮಂದಿರಿಗೆ ಆರತಿ ಎತ್ತುವದಕ್ಕಾಗಿ ನಿಂತ ಸುಮಂಗಲೆಯರ ಥಾಟು ಹೇಳ ತೀರದು. ಗೋದಿಯ ಅಗಿಗಳನ್ನು ಕೈಯಲ್ಲಿ ಹಿಡಿದು, (ಹಳೇ ರೂಢಿ ಇದ್ದ ಹೆಣ್ಣುಮಕ್ಕಳಿದ್ದಲ್ಲಿ) ಹಿರಿಯರ ಆಶೀರ್ವಾದ ಪಡೆಯಲು ಮನೆ ಮನೆಗೆ ಹೋಗುವ ಹರೆಯದ ಹೆಣ್ಣುಮಕ್ಕಳು, ಮುತ್ತೈದೆಯರು ಶಕ್ತಿದೇವತೆಯ ಅನಂತ ರೂಪಗಳೇನೋ? ಫ್ಯಾಶನ್ದ ಹೆಣ್ಣುಮಕ್ಕಳಿದ್ದವರೂ ಒಳ್ಳೇ ರೀತಿಯ ಸೀರೆಗಳನ್ನು ಉಟ್ಟು ಹೂ ಮುಡಿದು ಕೊಂಡು, ಪೇಟೆಯಲ್ಲಿ ಯುವಕರು ಭೆಟ್ಟಿಯಾಗುವರು ಎಂಬ ಆಸೆಯಿಂದ ಹೊರಟಿರುವುದನ್ನು ನಾವು ಕಾಣಬಹುದು! [ಹಾಗೆ ಯುವಕರೂ!] ಒಟ್ಟಿನ ಮೇಲೆ ಆನಂದದಿಂದ ಕಳೆಯುವರು ಆ ದಿನ! ಅಷ್ಟೇ ತಾನೆ! ಆದರೆ ಶಕ್ತಿದೇವತೆಯ ಮಹತ್ವವನ್ನು ಆ ದಿನ ತಿಳಿ ತರೆ ಎಲ್ಲರಿಗೂ ಹಿತ. ಎಲ್ಲರಿಗೂ ಹಿತವಾದರೆ ನಮ್ಮ ಸಮಾಜ ತಾನೇ ಸುಧಾರಿಸುವುದು. ಮುಖ್ಯ ಒಬ್ಬರೊಬ್ಬರಲ್ಲಿ ನಿಜವಾದ ಪ್ರೇಮವಿದ್ದರೇ ಅಲ್ಲಿ ಪಾಪಕ್ಕೆ ಎಡೆಯಿಲ್ಲ. ಸಂಶಯಕ್ಕೆ ಕಾರಣವಿಲ್ಲ. ಕನ್ನಡ ನಾಡು ಒಳ್ಳೇ ಸಂಸ್ಕೃತಿಯುಳ್ಳ ನಾಡು. ಅದನ್ನು ಕಾಯ್ದುಕೊಳ್ಳುವದು ನಮ್ಮ ಆದ್ಯ ಕರ್ತವ್ಯ!

ಮುಖ್ಯವಾಗಿ ಹೇಳುವದಂದ್ರ ಜ್ಯೋತಿಷ್ಯದ ಮೂರುವರೆ ಶುಭ ದಿನಗಳಲ್ಲಿ ಈ ದಿನವೂ ಸೇರಿದೆ. ಈ ಮಿತಿಯು ಮಾತ್ರ ಹಿಂದುಸ್ಥಾನದವರಿಗೆಲ್ಲ ಮಹತ್ವದ್ದಾಗಿದೆ. ಹೊಸ ಕೆಲಸವನ್ನು ಆರಂಭಿಸುವವರು ಇಂದೇ ಆರಂಭಿಸುತ್ತಾರೆ. ನಮ್ಮ ರಾಜರುಗಳು ಇಂದಿನ ದಿನವೇ ಹೊರಗೆ ಬೀಡು ಬಿಟ್ಟು ಯುದ್ಧದ ವರಸೆಗಳನ್ನು ಮಾಡುತ್ತಿದ್ದರು. ವಿಜಯಯಾತ್ರೆಯ ಪ್ರಾರಂಭ ಮಾಡುತ್ತಿದ್ದರು.

ಇವೆಲ್ಲ ಹಳೆಯ ಕತೆಯಾಯಿತು. ಈಗ ನಾವು ಕನ್ನಡ ನಾಡ ನುಡಿಗಳ ಅಂದು ಇಂದು ಮುಂದುಗಳ ಬಗೆಗೆ ವಿಚಾರಿಸಬೇಕು. ನಾವೆಲ್ಲ ಕೂಡಿ 'ಏಕೀಕೃತ ಕರ್ನಾಟಕ' ಎಂದು ಪ್ರತಿಧ್ವನಿಸುವಂತಾಗಬೇಕು [ ಕರ ತಾಡನ ....... ]

ಸಾಕು ಹೊತ್ತು ಆದಂತಾಯಿತು. ನೀವೆಲ್ಲ ದಣಿದಿದ್ದೀರಿ. ಇರಲಿ. ನಾವು ಈಗ ಶಕ್ತಿದೇವಿಯ ಎದುರಿನಲ್ಲಿ 'ಮೊದಲಿನ ಸುದಿನಗಳು ಬರಲಿ. ನಾಡೆಲ್ಲ ಒಳ್ಳೇ ಬೆಳೆಯ ಕಣಜವಾಗಲಿ, ಕರ್ನಾಟಕದ ಕೀರ್ತಿ ಬೆಳೆದು ಭಾರತ ಮಾತೆಯ ಅಚ್ಚುಮೆಚ್ಚಿನ ಪ್ರಾಂತವಾಗಲಿ; ಭಾರತ ಸಮೃದ್ಧಿಹೊಂದಿ ಮೊದಲಿನಂತೆ ಬಂಗಾರದ ಹೊಗೆ ಹೊರಡಲಿ. ಎಂದು ದೇವಿಯಲ್ಲಿ ಬೇಡಿಕೊಳ್ಳೋಣ ಮತ್ತು ಈ ಸುಂದರ ಹಾಡನ್ನು ಕೇಳಿ (" ಅಂದ್ರೆ ಇಲ್ಲಿ ಈ ಪದ್ಯದ ರೇಕಾರ್ಡ ಹಚ್ಚಬೇಕು. ")

'ನಾಡ ಗುಡಿಯ ನೇಹಸುವಾ ಪಾರಿಸುವಾ ಬಾಸಿಗೆ
ದುಡಿದು ದಣಿದು ಹಾಡಿ ತಣಿದು ... ... ದು.

ಹಾಡು ಮುಗಿಯಲು ಎಲ್ಲರೂ ಕರ್ನಾಟಕ ಮಾತೆಗೆ ಜಯವಾಗಲಿ; ಭಾರತ ಮಾತೆಗೆ ಗೆಲವಾಗಲಿ; (ಎಂದು ಕಿವಿಗಡಚಿಕ್ಕುವಂತೆ ಹೇಳುವರು.) ಸಭೆಗೆ ಬುದ್ಧಯ್ಯಾ ಮಾಸ್ತರ, ಆನಂದ, ಆನಂದನ ತಾಯಿ ನಂದಿನಿ, ಆನಂದನ ತಂದೆ ನಂದಗೋಪ ಮೊದಲಾದವರೂ ಬಂದಿದ್ದರು. ಊರ ಪ್ರತಿಷ್ಠಿತರು ವಿರಾಜಮಾನರಾಗಿದ್ದರು.

ಎಲ್ಲರೂ ಆನಂದದಿಂದ ಸಭೆ ಮುಗಿಯಲು ತಮ್ಮ ತಮ್ಮ ಮನೆಗೆ ತೆರಳುವರು.

———